

# ಸಪ್ತಗಿರಿ

ಆಗಸ್ಟ್ 1986

ಬೆಲೆ: ರೂ ೧

ತಿರುಮಲೆ ತಿರುಪತಿ ದೇವಸ್ಥಾನಗಳ ಸಚಿತ್ರ ಮಾಸ ಪತ್ರಿಕೆ



ಕಾಂತಸ್ತೇ ಪುರುಷೋತ್ತಮಃ ಫಣಿಪತಿಃ ಶಯ್ಯಾಸನಂ ವಾಹನಂ
ವೇದಾತ್ಮಾ ವಿಹಗೇಶ್ವರಃ ಯವನಿಕಾ ಮಾಯಾ ಜಗನ್ಮೋಹಿನೀ ।
ಬ್ರಹ್ಮೇಶಾದಿ ಸುರವ್ರಜಃ ಸ್ವದಯಿತಃ ತ್ವದ್ದಾಸ ದಾಸೀಗಣಃ
ಶ್ರೀರಿತ್ಯೇವ ಚ ನಾಮತೇ ಭಗವತಿ ಬ್ರೂಮಃ ಕಥಂ ತ್ವಾಂ ವಯಂ ॥

—ಶ್ರೀಯಾಮುನಾಚಾರ್ಯ.

[ನಿನ್ನ ಪತಿ ಪುರುಷೋತ್ತಮನು, ಹಾಸಿಗೆ ಹಾಗೂ ಆಸನ ಆದಿಶೇಷ, ವೇದಾತ್ಮನೂ, ಪಕ್ಷಿರಾಜನೂ ಆದ ಗರುಡನೇ ವಾಹನ. ಯವನಿಕೆಯೋ ಜಗನ್ಮೋಹಿನಿಯಾದ ಮಾಯೆ. ಪತ್ನೀ ಸಮೇತರಾದ ಬ್ರಹ್ಮ, ಈಶ್ವರ ಮೊದಲಾದ ದೇವಗಣವೇ ದಾಸ ದಾಸಿಯರು. ಶ್ರೀ ಎಂದೇ ಹೆಸರುಳ್ಳ ನಿನ್ನನ್ನು ಹೇ ಭಗವತೀ, ನಾವು ಹೇಗೆ ತಾನೇ ಸ್ತುತಿಸಬಲ್ಲೆವು ]

ಸಂದರ್ಶಿ! ಆನಂದಿಸಿ

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ, ತಿರುಮಲೆ



## ವಾರ್ಷಿಕ ಪವಿತ್ರೋತ್ಸವ

### ದಿನಾಂಕ 15-8-86 ರಿಂದ 17-8-86 ರ ವರೆಗೆ

| | | |
|---|---|---|
| 14–8–86 | ಗುರುವಾರ | ಅಂಕುರಾರ್ಪಣೆ |
| 15–8–86 | ಶುಕ್ರವಾರ | ಪವಿತ್ರ ಪ್ರತಿಷ್ಠೆ |
| 16–8–86 | ಶನಿವಾರ | ಪವಿತ್ರಸಮರ್ಪಣೆ |
| 17–8–86 | ಭಾನುವಾರ | ಪೂರ್ಣಾಹುತಿ |

ಮೇಲ್ಕಂಡ ಉತ್ಸವವನ್ನು ಅರ್ಜಿತವನ್ನಾಗಿ ಆಚರಿಸ ಬಯಸುವ ಗೃಹಸ್ಥರು ರೂ 5000/– ಶುಲ್ಕ ಸಲ್ಲಿಸುವುದರಿಂದ ಸೇವೆಯಲ್ಲಿ ಭಾಗಿಗಳಾಗಬಹುದು. ತಿರುಮಲೆಯ ದೇವಾಲಯದ ಸ್ನಪನಮಂಟಪದಲ್ಲಿ ಕುಳಿತು ಸೇವೆಯನ್ನು ನೋಡಲು ಮೂರು ದಿನವೂ ಗೃಹಸ್ಥರನ್ನೂ ಒಳಗೊಂಡಂತೆ ಐದುಮಂದಿಯನ್ನು ಒಳಗೆ ಅನುಮತಿಸಲಾಗುವುದು. ತಿರುವೀಧಿ ಮೆರವಣಿಗೆಯ ನಂತರ ಮೂರುದಿನವೂ ಐದುಮಂದಿಯನ್ನು ದರ್ಶನಕ್ಕೆ ಅನುಮತಿಸಲಾಗುವುದು. ಪ್ರತಿಗೃಹಸ್ಥರಿಗೂ ಒಂದು ಪವಿತ್ರವನ್ನು ನೀಡಲಾಗುವುದು. ಮೊದಲದಿನ ತೋಮಾಲಸೇವೆಗೂ ಎರಡನೆಯದಿನ ಅರ್ಚನೆಗೂ ಮೂರನೆ ದಿನ ಹಾಗೂ ಕಡೆಯದಿನ ಏಕಾಂತಸೇವೆಗೂ ಇಬ್ಬರನ್ನು ಅನುಮತಿಸಲಾಗುವುದು.

ವಾರ್ಷಿಕ ಪವಿತ್ರೋತ್ಸವಗಳ ದೃಷ್ಟಿಯಿಂದ ದಿನವೂ ನಡೆಯುವ - ಅರ್ಜಿತಸೇವೆಗಳು–ಕಲ್ಯಾಣೋತ್ಸವ, ಬ್ರಹ್ಮೋತ್ಸವ, ವಾಹನಸೇವೆಗಳು, ಊಂಜಲ್‌ಸೇವೆ, ವಸಂತೋತ್ಸವ–ಮೊದಲಾದವನ್ನು 15–8–86 ರಿಂದ 17–8–86 ವರೆಗೆ ಮನ್ನಾ ಮಾಡಲಾಗಿದೆ. ಪವಿತ್ರೋತ್ಸವವನ್ನು ಅರ್ಜಿತಸೇವೆಯನ್ನಾಗಿ ನಡೆಸಬಹುದು.

ತಿ.ತಿ.ದೇ.




ಗೌರವ ಸಂಪಾದಕರು :

ಎಸ್. ಲಕ್ಷ್ಮೀನಾರಾಯಣ ಐ.ಎ.ಎಸ್.

ಸಂಪಾದಕ :

ಕೆ. ಸುಬ್ಬಾರಾವು, ಎಂ.ಎ.,

ಉಪಸಂಪಾದಕ :

ಎಸ್. ಶ್ರೀನಿವಾಸನ್ ಎಂ.ಎ.,

ಮುದ್ರಣ .

ಎಂ. ವಿಜಯಕುಮಾರ್‌ರೆಡ್ಡಿ

ಲೇಖನ/ಜಾಹೀರಾತುಗಳಿಗೆ

ಸಂಪಾದಕರು,
ತಿರುಮಲ ತಿರುಪತಿ ದೇವಸ್ಥಾನಗಳು,
ತಿರುಪತಿ

ಪ್ರತಿಗಳಿಗೆ;
ವೆಲ್‌ಫೇರ್ ಆಫೀಸರ್
ಸೇಲ್ಸ್‌ವಿಂಗ್
ತಿರುಮಲ ತಿರುಪತಿ ದೇವಸ್ಥಾನ
ತಿರುಪತಿ.

**ಬಿಡಿ ಪ್ರತಿ ೧-೦೦**

**ವಾರ್ಷಿಕ ಚಂದಾ ೧೨-೦೦**





ಸಂಪುಟ ೧೭] ಆಗಸ್ಟ್ ೧೯೮೬ [ಸಂಚಿಕೆ ೩


# ವಿಷಯಸೂಚಿ



ಮುಖಚಿತ್ರ : ಶ್ರೀಕೃಷ್ಣ ಚಿತ್ರ–ಬಾಬುನಾಥ್

ಒಳಗಡೆ : ಆನಿವರ ಆಸ್ಥಾನದಲ್ಲಿ ಪುಷ್ಪಪಲ್ಲಕ್ಕಿ, ಪವಿತ್ರೋತ್ಸವ.

# ಸಂಪಾದಕೀಯ

ಕೌರವ ಕೃಷ್ಣನನ್ನು ರಾಯಭಾರಕ್ಕೆ ಬರಹೇಳುವಾಗ ಕುಮಾರವ್ಯಾಸ ಹೇಳುವ ಮಾತು 'ಬರಲಿ ಕರೆ ಕೈತವದ ಶಿಕ್ಷಾಗುರು'. ದ್ವಾಪರಯುಗದ ಜನಸಾಂದ್ರತೆಯ ನಡುವೆ ಎದ್ದುಕಾಣುವ ಒಂದು ವ್ಯಕ್ತಿತ್ವ–ಒಂದು ನಿತ್ಯ ತುಡಿತದ ವ್ಯಕ್ತಿತ್ವ ಎಂದರೆ, ಲೋಕ ಮಲಗಿದಾಗಲೂ ತಾನು ಎಚ್ಚರವಿದ್ದು, ಧರ್ಮ ಸಂಸ್ಥಾಪನೆಗಾಗಿ ಅಹರ್ನಿಶಿ ದುಡಿದ, ದುಡಿದು ಸಫಲನಾದ ಶ್ರೀ ಕೃಷ್ಣನ ವ್ಯಕ್ತಿತ್ವ ಎನ್ನಬೇಕು. ಅಂತಹ ಮಹಾನ್ ವ್ಯಕ್ತಿಯನ್ನು ಕೌರವ ಕರೆದ ಬಗೆಯಿದು –ಕೈತವದ ಶಿಕ್ಷಾಗುರು. ಮನದಲ್ಲಿ ಕೊಂಕು ಇದ್ದರೆ ಜಗತ್ತೇ ಡೊಂಕಾಗಿ ಕಾಣುತ್ತದೆ ಎನ್ನಲು ಭೂರಿಶ್ರವ, ನರಕಾಸುರ, ಶಿಶುಪಾಲ, ರೊಡನೆಯೇ ಕೌರವ ರಾಯನೂ ಒಂದು ಉದಾಹರಣೆಯೇ.

ಶ್ರೀ ಕೃಷ್ಣನನ್ನು ಹಲವರು ಹಲವು ವಿಧವಾಗಿ ಕರೆದರು. ಅರ್ಜುನನಿಗೆ ಅವನು ಗುರು ಸಖ ನಾದರೆ, ದ್ರೌಪದಿಗೆ ಆತ್ಮ ಬಂಧು. ವಿದುರನಿಗೆ, ಭೀಷ್ಮರಿಗೆ, ಕಪಟನಾಟಕ ಸೂತ್ರಧಾರಿ ಆದರೆ ಧೃತ ರಾಷ್ಟ್ರನಿಗೆ ಅವನೊಬ್ಬ ಮಾಯಗಾರ. ಅಂತೂ ಎಲ್ಲರೂ ತಂತಮ್ಮ ಮನದಂತೆಯೇ ಅವನನ್ನು ಕಂಡರು. ಅವರವರ ಭಾವಕ್ಕೆ ಅವರವರ ವೇಶಕ್ಕೆ ತಕ್ಕಂತೆ ಅವರವರಿಗೆಲ್ಲ ತಾನು ದರ್ಶನವೀಯುವುದಾಗಿ ಅವನೇ ಹೇಳಿದ್ದಾನಲ್ಲವೇ–ಯೇ ಯಥಾ ಮಾಂ ಪ್ರಪದ್ಯಂತೇ ತಾಂಸ್ತಥೈವ ಭಜಾಮ್ಯಹಂ.

ಪ್ರಶ್ನೆ–ಅವನು ಹೇಗೆ ಹೇಗೆ ಯಾರು ಯಾರಿಗೆ ಕಂಡುಬಂದ ಎಂಬುದಲ್ಲ. ಯಾವ ಯಾವ ರೂಪದಲ್ಲಿ ಯಾವ ಯಾವುದನ್ನು ಸಾಧಿಸಿದ ಎಂಬುದು. ಪಾಂಡವರ ಬಂಡಿಯ ಬೋವನಾಗಿ ಧರ್ಮ ರಾಯಾದಿಗಳನ್ನು ಕುರುಕ್ಷೇತ್ರ ದಾಟುವಂತೆ ಮಾಡಿದ. ಕದನ ಮಾಡುವ ಮುನ್ನ ಕರ್ಣನನ್ನು ಮೋಕ್ಷ ಕಾಮಿಯಾಗಿಸಿ, ಭೀಷ್ಮ ದ್ರೋಣರಿಗೊದಗಿದ ಧರ್ಮಸಂಕಟಗಳನ್ನು ಪರಿಹರಿಸಿದ – ಸುಂದರವಾದ ತಿರುವುಗ ಳನ್ನು ನೀಡಿ. ಅತ್ಯದ್ಭುತ ಜೀವನ ನಾಟಕ ನಿರ್ದೇಶಕನಂತೆ ಎಲ್ಲರನ್ನೂ ಎಲ್ಲವನ್ನೂ ತನ್ನ ಪರಮಗಂತ ವ್ಯವಾದ ಧರ್ಮಸಂಸ್ಥಾಪನೆಗೇ ತಿದ್ದಿಕೊಳ್ಳುತ್ತ, ಅದಕ್ಕೆ ತಕ್ಕ ವ್ಯಕ್ತಿ ಸ್ವಾತಂತ್ರ್ಯವನ್ನು ಎಲ್ಲರಿಗೂ ನೀಡುತ್ತ ನಡೆದ. ಎಂತಲೇ ಮುತ್ಸದ್ದಿಗಳ ಮಹಾಚಾರ್ಯ ಎಂದು ಕರೆಸಿಕೊಂಡ.

ಅವನು ನಡೆದ ಹಾದಿಯ ಬಗ್ಗೆ ರಹಸ್ಯವೇನೂ ಇಲ್ಲ. ತನ್ನ ನಡತೆಯ ಬಗ್ಗೆ ತಾನೇ ವಿವರಗ ಳನ್ನು ನೀಡಿದ್ದಾನೆ. ಜಯದಲ್ಲಿ ಹಿಗ್ಗದೆ, ಸೋಲಿನಲ್ಲಿ ಕುಗ್ಗದೆ ಸೋಲನ್ನೂ ಗೆಲವಿನ ಸೋಪಾನ ಮಾಡಿ ಕೊಳ್ಳುವ ಹಾದಿ ಅದು. ಉದಾ–ಜರಾಸಂಧ ಮುರಾಸುರರ ಬಗ್ಗೆ ಅವನ ಹಿಂಜರಿತ. ಅವೂ ಒಂದು ಮಹಾನಾಟಕದ ಎರಡು ಸಂದರ್ಭಗಳಷ್ಟೇ. ಬಹಳ ಹತ್ತಿರ ಬಂದಾಗ ಅಭಿಮನ್ಯು ಘಟೋತ್ಕಚ ಉಪ ಪಾಂಡವರ ಬಲಿನೀಡುವಿಕೆ. ಬಂಧುಗಳಿಲ್ಲದ ಬರಿಯ ಬಯಲಲಿ ರಾಜ್ಯಭಾರ ಮಾಡುವ ಧರ್ಮರಾಯಾದಿ ಗಳ ಬವಣೆಯೂ ಅಷ್ಟೇ; ಕಲಿಯುಗಕೆ ಗತಿ ಬೇಕು ಎನ್ನುವ ಪ್ರೀತಿಯನ್ನು ಮೀರಿದ ಕಾಲಪ್ರಜ್ಞೆ ಇಲ್ಲಿ ಮುಖ್ಯ.

ಎಂದರೆ ಇಲ್ಲೆಲ್ಲ ಆತ ತಾನು ನಡೆಯಬೇಕಾದ ಹಾದಿ ಯಾವುದು, ಅದಕ್ಕಾಗಿ ಎಷ್ಟು ತ್ಯಾಗ ಮಾಡಬೇಕು, ಕಷ್ಟದ ಮಿತಿಯೇನು ಎಂಬುದನ್ನೆಲ್ಲ ತೂಗಿ ನೋಡಿ ಖಚಿತವಾದ ನಿರ್ಣಯಗಳಿಗೆ ಬಂದು ಮುಟ್ಟಿದ್ದಾನೆ. ಎಂಬುದು ತುಸು ಆಲೋಚಿಸಿದರೆ ಸ್ಪಷ್ಟವಾಗುವ ಅಂಶ. ಒಳಿತಿನ ಕಡೆಗೆ ಸಾಮಾಜಿಕ ಧಾರ್ಮಿಕ ನ್ಯಾಯದ ಕಡೆಗೆ ನಡೆಯುವಲ್ಲಿ ಈ ರೀತಿಯ ಖಚಿತ ನಿಲುವು ಅಗತ್ಯವೂ ಹೌದು. ಅಂದೋ ಲಿತ ಮನದಿಂದ ಆಲೋಚನೆ, ಅಭ್ಯುತ್ಥಾನಪಥನಿರ್ಣಯ ನಡೆಯದು. ಅದಕ್ಕೆ ಬೇಕು ಪ್ರಯೋಗ ಶಾಲೆಯ ಆಸಕ್ತಿ. ಅದರಿಂದ ಪಥ ನಿರ್ಣಯ ಮೊದಲಾದರೆ ಗಮನ ತಂತಾನೆ ನಡೆಯುತ್ತದೆ.

ಶ್ರೀ ಕೃಷ್ಣ ಜಯಂತಿ ಶುಭದಿನದಲ್ಲಿ ಧರ್ಮದ ಹಾದಿಯಲ್ಲಿ ನಡೆಯುವ ಬುದ್ಧಿಯನು ಅವನು ನೀಡಲಿ ಎಂದು ಪ್ರಾರ್ಥಿಸುವ.

# ಶ್ರೀಕೃಷ್ಣ ಚೈತನ್ಯರು

ಭಾರತ ಅನೇಕ ಸಂತ–ಮಹಂತರಿಗೆ, ದಾಸ, ದಾರ್ಶನಿಕರಿಗೆ, ಭಕ್ತ, ತಪಸ್ವಿ, ಯೋಗಿಗಳಿಗೆ ಜನ್ಮ ನೀಡಿದ ನಾಡಾಗಿದೆ. ಅದರಲ್ಲೂ ಬಂಗಾಲ ಪ್ರಾಂತವಂತೂ ಇಂಥ ಅನರ್ಘ್ಯ ಮಹನೀಯ ರತ್ನಗಳ ಆಗರವೆನಿಸಿದೆ. ಭಾರತದ ಕೀರ್ತಿಯನ್ನು ಜಗತ್ತಿನ ತುಂಬೆಲ್ಲಾ ಹರಡಿದ ವಿವೇಕಾನಂದರು, ರಾಮಕೃಷ್ಣರು, ಜಗದೀಶಚಂದ್ರಬೋಸ,ರವೀಂದ್ರನಾಥ ಟಾಗೋರ, ಅರವಿಂದರು, ಶರಚ್ಚಂದ್ರರು–ಹೀಗೆ ಬಂಗಾಲದ ಮಹಾಪುರುಷರ ಪಟ್ಟಿಯನ್ನು ಮಾಡುತ್ತ ಹೋದರೆ ಅದಕ್ಕೆ ಕೊನೆಯೇ ಇಲ್ಲವಾಗಬಹುದು. ಈ ಮಹಾವ್ಯಕ್ತಿಗಳ ಪರಂಪರೆ ತುಂಬ ಪ್ರಾಚೀನವೂ ಹೌದು. ಇದೇ ಪರಂಪರೆಯಲ್ಲಿ ಸೇರಿ, ತಮ್ಮ ಅಗಾಧ ಭಕ್ತಿಯಿಂದ ಬಂಗಾಲವಷ್ಟೆ ಏಕೆ, ಇಡೀ ಭಾರತದಲ್ಲೇ ಭಕ್ತಿ ಪ್ರವಾಹವನ್ನು ಹರಿಸಿ, ವೈಷ್ಣವಪಂಥ ಸ್ಥಾಪಿಸಿ, ಅವರೆಗೆ ಜಡವಾಗಿದ್ದ ಭಾರತೀಯರ ಆಧ್ಯಾತ್ಮ ಶಕ್ತಿಯನ್ನು ಮತ್ತೊಮ್ಮೆ ಜಾಗೃತಗೊಳಿಸಿ ತನ್ನೂಲಕ ಬಡವ, ಶ್ರೀಮಂತರನ್ನು, ಸ್ತ್ರೀ, ಪುರುಷರನ್ನು, ಅಂದಿನ ಕಾಲದಲ್ಲಿ ಸವರ್ಣಿಯರು ಎನಿಸಿಕೊಂಡಿದ್ದ ಮೇಲ್ಜಾತಿಯವರು ನಿರ್ಲಕ್ಷಿಸಿದ್ದ ಅಸ್ಪೃಶ್ಯರನ್ನು ಕೂಡ ತಮ್ಮ ಪಂಥದಲ್ಲಿ ಸೇರಿಸಿಕೊಂಡು ಭಾರತದ ಭಾವೈಕ್ಯತೆಗೊಂದು ಭದ್ರ ಬುನಾದಿಯನ್ನು ಹಾಕಿದ ವ್ಯಕ್ತಿಯೇ ಶ್ರೀಕೃಷ್ಣ ಚೈತನ್ಯರು.

ಇಂದಿಗೆ ಸರಿಯಾಗಿ 500 ವರ್ಷಗಳ ಹಿಂದೆ ಬಂಗಾಲದ ನವದ್ವೀಪ ಅಥವಾ ನದಿಯಾ ಎಂಬಲ್ಲಿ ಚೈತನ್ಯರು ಜನಿಸಿದರು. ಆ ಕಾಲದಲ್ಲಿ ನದಿಯಾ ಸುಪ್ರಸಿದ್ಧ ವಿದ್ಯಾಕೇಂದ್ರವಾಗಿತ್ತು. ಅಲ್ಲಿ ವಾಸಿಸುತ್ತಿದ್ದ ಜಗನ್ನಾಥ ಮಿಶ್ರ ಹಾಗೂ ಆತನ ಪತ್ನಿ ಶಚೀದೇವಿ ಎಂಬ ದಂಪತಿಗಳಿಗೆ ಹತ್ತನೆಯ ಮಗುವಾಗಿ ಶ್ರೀಕೃಷ್ಣ ಚೈತನ್ಯರು ಜನಿಸಿದರು. ಈ ಮೊದಲಿನ ಜನಿಸಿದ ಎಂಟು ಜನ ಹೆಣ್ಣು ಮಕ್ಕಳು ತೀರಿಕೊಂಡಿದ್ದರಿಂದಲೂ ಮತ್ತು ಒಂಬತ್ತನೆಯ ಗಂಡು ಮಗು ಕೂಡ ಮನೆಬಿಟ್ಟು ಹೋಗಿದ್ದರಿಂದ, ತುಂಬ ದುಃಖ ಮತ್ತು ನಿರಾಶೆಯಲ್ಲಿದ್ದ ಆ ದಂಪತಿಗಳ ಜೀವನದ ಆಶಾಕಿರಣವಾಗಿ ಶ್ರೀಕೃಷ್ಣ ಚೈತನ್ಯರು ಜನಿಸಿದಾಗ, ಅವೇಳೆಗೆ ಅಂಧಕಾರದಲ್ಲಿ ಮುಳಗಿದ್ದ ಭಾರತದಲ್ಲೂ ಜ್ಞಾನ – ಭಕ್ತಿಗಳ ಸೂರ್ಯ ಜನಿಸಿದಂತಾಯಿತು.

ಮುದ್ದು–ಮುದ್ದಾದ ಈ ಗಂಡುಮಗು ಜನಿಸಿದಾಗ ಮನೆಯಲ್ಲಿದ್ದವರಿಗೆಲ್ಲ ತುಂಬ ಸಂತೋಷ. ಮಗುವಿಗೆ ಹರ್ಷದಿಂದ ವಿಶ್ವಂಭರ ಎಂದು ನಾಮಕರಣ ಮಾಡಿದರು. ಬಂಗಾರವರ್ಣದ ಕಾಂತಿಯಿಂದ ಕೂಡಿದ ಆ ಮಗುವನ್ನು ಪ್ರೀತಿಯಿಂದ ಎಲ್ಲರೂ 'ಗೌರಾಂಗ'ನೆಂದೇ ಕರೆಯ ತೊಡಗಿದರು. ಈತನಗಿಂತ ಮೊದಲು ಎಂಟು ಜನ ಮಕ್ಕಳನ್ನು ಹೆತ್ತು–ಅವೆಲ್ಲವು ಸತ್ತ ನೋವು ಹೊತ್ತ ತಾಯಿ ಮಾತ್ರ ಇವನನ್ನು 'ನಿಮಾಯಿ'–'ಅರ್ಧ ಸತ್ತವ' ಎಂದೇ ಕರೆಯುತ್ತಿದ್ದಳು.

ಶಚೀದೇವಿಯ ತಂದೆ, ಎಂದರೆ ವಿಶ್ವಂಭರನ ಅಜ್ಜ ನೀಲಾಂಬರ ಚಕ್ರವರ್ತಿಯು ಆಗಿನ ಕಾಲದ ಪ್ರಸಿದ್ಧ ಜ್ಯೋತಿಷಿಗಳಾಗಿದ್ದರು. ಅವರು ಒಂದು ದಿನ ಈ ಮಗುವನ್ನು ನೋಡಿ ವಿಸ್ಮಿತರಾಗಿ "ಆಹ್ ಆ ತುಂಟ ಶ್ರೀಕೃಷ್ಣನೇ ಮತ್ತೆ ಅವತರಿಸಿ ಬಂದಾನಲ್ಲಾ, ಶಚೀ ನೀ ಪುಣ್ಯವಂತೆ!" ಎಂದು ಉದ್ಗರಿಸಿದರು. ಅವರ ಮಾತನ್ನು ಕೇಳಿ ಉಳಿದವರಿಗೂ ಆಶ್ಚರ್ಯ. ನೀಲಾಂಬರ ಚಕ್ರವರ್ತಿಗಳು ಹಲವಾರು ವಸ್ತುಗಳನ್ನು ಆ ಮಗುವಿನ ಮುಂದಿಡಲು ಅದು ಅವುಗಳಲ್ಲಿದ್ದ ಭಾಗವತ ಪುಸ್ತಕವನ್ನೇ ತೆಗೆದುಕೊಂಡು ಓದುವವರಂತೆ ನಟಿಸುತ್ತ ಕುಳಿತಂತೆ. ಅಷ್ಟೇ ಅಲ್ಲದೆ ಆ ಮಗು ಮಲಗಿ ನಿದ್ರಿಸುತ್ತಿದ್ದಾಗ 'ಹರಿ' ಎಂದು ಯಾರಾದರೂ ಕೂಗಿದರೂ ಸಾಕು 'ಹುಂ' ಎಂದು ಹೇಳುತ್ತಿತ್ತಂತೆ!

ಇಂಥ ಅಪರೂಪದ ಮಗು ನಿಮಾಯಿ ಬೆಳೆದಂತೆ ಅವನ ತುಂಟತನವೂ ಬೆಳೆಯಿತು. ಆದರೆ ತನ್ನ ತಾಯಿ ದೇವರ ಪೂಜೆ ಮಾಡುವಾಗ ಮಾತ್ರ ತಾನೂ ಕೈ ಜೋಡಿಸಿ ಗಂಭೀರವಾಗಿ ನಿಲ್ಲುತ್ತಿದ್ದ. ತಾಯಿಯ ಕಣ್ಣಲ್ಲಿ ಹೊಳೆಯುತ್ತಿದ್ದ ಭಕ್ತಿ ಜ್ಯೋತಿಗೆ ಮಾರುಹೋಗಿ ತಾನೂ ಕಣ್ಮುಚ್ಚಿ ದೇವರಿಗೆ ಭಕ್ತಿಯಿಂದ ತಲೆ ಬಾಗಿಸುತ್ತಿದ್ದ.

ಒಂದು ದಿನ ಮಗು 'ಗೌರಾಂಗ' ಆಳತೊಡಗಿದ. ಬಹಳವಾಗಿ ರಮಿಸಿ ಕೇಳಿದಮೇಲೆ ತಮ್ಮ ನೆಂಟರಾದ ಜಗದೀಶ ಮತ್ತು ಹಿರಣ್ಯರ ಮನೆಯರ ಮನೆಯಲ್ಲಿ ದೇವರ ನೈವೇದ್ಯಕ್ಕಾಗಿ ತಯಾರಿಸಿರುವ ತಿಂಡಿಗಳು ತನಗೆ ಬೇಕು–ಎಂದು ಹೇಳಿದ. ದೂರದಲ್ಲಿದ್ದ ಅವರ ಮನೆಯಲ್ಲಿ ವಿಶೇಷ. ತಿಂಡಿ ಮಾಡಿದ್ದು ಮಗುವಿಗೆ ಹೇಗೆ ಗೊತ್ತಾಯಿತು? ಎಂದು ಎಲ್ಲರಿಗೂ ಆಶ್ಚರ್ಯ. ಶ್ರೀ ಕೃಷ್ಣನೇ ಮಗುವಿನ ರೂಪದಲ್ಲಿ ಕೇಳುತ್ತಿದ್ದಾನೆಂದು ಭಾವಿಸಿದ ಜಗದೀಶ, ಹಿರಣ್ಯರು ತಮ್ಮ ಮನೆಯ ತಿಂಡಿ ತಂದಿಟ್ಟರು.

ಶ್ರೀ ಗುರುನಾಥ ಇನಾಮದಾರ

ಈ ರೀತಿಯಾಗಿ ಗೌರಾಂಗ ಚಿಕ್ಕವನಿದ್ದಾಗಲೇ ಅಪರೂಪದ ಲೀಲೆಗಳನ್ನು ತೋರಿ ತನ್ನ ಅಲೌಕಿಕತೆಯನ್ನು ತೋರಿಸಿದುದರ ಜೊತೆಗೆ ಲೌಕಿಕ ವಿದ್ಯಾಭ್ಯಾಸವನ್ನು ನಡೆಸಿದನು. ತನ್ನ 14 ನೇ ವಯಸ್ಸಿನಲ್ಲಿ ಸಂಸ್ಕೃತದಲ್ಲಿ ಪಾಂಡಿತ್ಯ ಸಂಪಾದಿಸಿದನು. ಆಗಲೆ ಒಂದು ಶಾಲೆಯನ್ನು ತೆರೆದು ಅಲ್ಲಿ ಅನೇಕ ವಿದ್ಯಾರ್ಥಿಗಳಿಗೆ ಪಾಠ ಪ್ರವಚನಗಳನ್ನು ಪ್ರಾರಂಭಿಸಿದ. ಆತನ ವಿದ್ವತ್ತು ಕಂಡು ಬೆರಗಾದ ಪಂಡಿತ ಜನ ಆತನಿಗೆ 'ವಿದ್ಯಾಸಾಗರ' ಎಂಬ ಬಿರುದು ನೀಡಿದರು. ಇದೇ ಸಮಯದಲ್ಲಿ ಕಾಶ್ಮೀರದ ಕೇಶವಭಟ್ಟ ಎಂಬ ಉದ್ದಾಮ ಪಂಡಿತನು ನವದ್ವೀಪಕ್ಕೆ ಬಂದನು. ಆಗಿನ ಕಾಲದಲ್ಲಿ ಅವನು ಭಾರತದಲ್ಲೇ ತುಂಬ ಪ್ರಸಿದ್ಧಿಯನ್ನು ಪಡೆದಿದ್ದನು. ನವದ್ವೀಪದಲ್ಲಿದ್ದ ಗೌರಾಂಗನ ಕೀರ್ತಿಯನ್ನು ಕೇಳಿ ಅವನನ್ನು ವಾದ ಮಾಡಲು ಆಹ್ವಾನಿಸಿದನು. ಮೂರು ದಿನಗಳವರೆಗೆ ನಡೆದ ಈ ವಾದದಲ್ಲಿ ಗೌರಾಂಗ ಕೇಶವಭಟ್ಟನನ್ನು ಸಂಪೂರ್ಣವಾಗಿ ಸೋಲಿಸಿದ್ದಲ್ಲದೆ ಅವನು ಗಂಗಾನದಿಯನ್ನು ಕುರಿತು ರಚಿಸಿದ ಪದ್ಯಗಳಲ್ಲಿದ್ದ ತಪ್ಪುಗಳನ್ನು ಎತ್ತಿ ತೋರಿಸಿದನು. ಕೇಶವಭಟ್ಟನ ಅಹಂಕಾರವು ಮುರಿಯಿತು. ಅವನಿಗೆ ಭಕ್ತಿಯ ಮಹಿಮೆಯನ್ನು ತಿಳಿಸಿ ಶ್ರೀಕೃಷ್ಣ ಚೈತನ್ಯರು ಅವನಲ್ಲೂ ಕೃಷ್ಣ ಭಕ್ತಿಯ ಬೀಜವನ್ನು ನೆಟ್ಟರು.

ವಿಶ್ವಂಭರ ಉಪಾಧ್ಯಾಯನಾಗಿದ್ದಾಗಲೇ ಒಂದು ದಿನ ಸಾಯಂಕಾಲ ಮನೆಗೆ ಬರುತ್ತಿದ್ದಾಗ ವಲ್ಲಭಾಚಾರ್ಯನೆಂಬ ಪಂಡಿತನ ಮಗಳು 'ಲಕ್ಷ್ಮೀ'ಯನ್ನು ಕಂಡು, ಅವಳನ್ನೇ ಮದುವೆಯಾಗ ಬೇಕೆಂದು ಮನದಲ್ಲಿ ನಿರ್ಧರಿಸಿದನು. ತನ್ನ ನಿರ್ಧಾರವನ್ನು ತಾಯಿಗೆ ತಿಳಿಸಿದನು. ತಾಯಿಯೂ ಕೂಡ ಸಂತೋಷದಿಂದ ಒಪ್ಪಿದಳು. 'ಲಕ್ಷ್ಮಿ'ಯ ತಂದೆ, ತಾಯಿಗಳು ಒಪ್ಪಿದರು. ಶುಭದಿನ ಶುಭಮುಹೂರ್ತದಲ್ಲಿ ಅವರಿಬ್ಬರ ಮದುವೆಯಾಯಿತು. ಮುಂದೆ ಅವರಿಬ್ಬರೂ ಪ್ರವಾಸಕ್ಕೆ ಹೋದಾಗ ಹಾವುಕಚ್ಚಿ 'ಲಕ್ಷ್ಮಿ' ಸಾಯುವಳು. ವಿಶ್ವಂಭರನು ತಾಯಿಯ ಆಗ್ರಹದ ಮೇರೆಗೆ 'ರಾಜ ಪಂಡಿತ ಸನಾತನ ಮಿಶ್ರ' ಎಂಬವರ ಮಗಳಾದ ವಿಷ್ಣುಪ್ರಿಯಳನ್ನು ಮದುವೆಯಾದನು.

1508 ರಲ್ಲಿ ವಿಶ್ವಂಭರನು ತನ್ನ ತಂದೆಯ ಕರ್ಮಗಳನ್ನು ಮಾಡಲು ಗಯಾಕ್ಕೆ ಹೋದನು. ಅಲ್ಲಿ ಈಶ್ವರೇಚ್ಛೆಯಂತೆ ಶ್ರೀಕೃಷ್ಣಭಕ್ತರಾಗಿದ್ದ 'ಈಶ್ವರಿಪುರಿ' ಎಂಬುವರ ಭೇಟಿಯಾಯಿತು.

ಅವರೇ ತನ್ನ ಗುರುಗಳೆಂಬ ಅನನ್ಯಭಾವದಿಂದ ಅವರನ್ನು "ಗುರುಗಳೇ ನನಗೆ ಮಂತ್ರದೀಕ್ಷೆಯನ್ನು ಅನುಗ್ರಹಿಸಿ" ಎಂದು ಕೇಳಿಕೊಂಡ. ಅವರು ಈ ಹೊಸ ಶಿಷ್ಯನ ಸಾಮರ್ಥ್ಯ ಅರಿತು ಅವನಿಗೆ ಗೋಪಾಲ ಮಂತ್ರದ ಹತ್ತು ಸೂತ್ರಗಳನ್ನು ಉಪದೇಶಿಸಿದರು. ಈ ಗುರೂಪದೇಶದ ನಂತರ ವಿಶ್ವಂಭರ ಪೂರ್ಣ ಬದಲಾಯಿಸಿದ. ಕೃಷ್ಣ ಭಕ್ತಿಯ ಪರಮಾನಂದ ಸಾಗರದಲ್ಲಿ ಈಜಾಡಲು ಬಯಸಿದ. ಆದಕ್ಕಾಗಿ ಕೃಷ್ಣನನ್ನು ಕಾಣಲು ಮಥುರಾಕ್ಕೆ ಅಲ್ಲಿಂದಲೇ ಹೊರಡಲು ಸಿದ್ಧನಾದ. ಆದರೆ ದೈವವಾಣಿ ಆತನಿಗೆ ಆತನ ಕರ್ತವ್ಯವನ್ನು ಎಚ್ಚರಿಸಿತು. ವಿಶ್ವಂಭರ ನವದ್ವೀಪಕ್ಕೆ ಹಿಂತಿರುಗಿದ.

ವಿಶ್ವಂಭರ ನವದ್ವೀಪಕ್ಕೆ ಹಿಂತಿರುಗಿ ಬಂದದ್ದು ಹೆಂಡತಿ ವಿಷ್ಣುಪ್ರಿಯಳಿಗೂ, ತಾಯಿ ಶಚೀದೇವಿಗೂ ಸಂತೋಷ ನೀಡಿತು. ವಿಶ್ವಂಭರ ಈಗ ತನ್ನ ಅಧ್ಯಾಪಕ ವೃತ್ತಿಯನ್ನು ಬಿಟ್ಟು ಕೇವಲ ಕೃಷ್ಣ ಧ್ಯಾನದಲ್ಲೇ ಮುಳುಗಿದಾಗ ಅವರು ಚಿಂತಿತರಾದರು. ವಿಶ್ವಂಭರ ಆಗಾಗ್ಗೆ ಜೋರಾಗಿ ಅಳುತ್ತ "ಹೇ ಕೃಷ್ಣಾ, ಮುರಾರೀ ನೀನು ಎಲ್ಲಿ ಹೋದೆ?" ಎನ್ನುತ್ತ ಧ್ಯಾನ ಸಮಾಧಿಯನ್ನು ಹೊಂದುತ್ತಿದ್ದರು. ವಿದ್ಯಾರ್ಥಿಗಳು 'ಪಾಠ ಹೇಳಿ ಕೊಡಿ' ಎಂದು ಒತ್ತಾಯಿಸಿದಾಗ, ಪಾಠ ಪ್ರಾರಂಭಿಸುತ್ತಿದ್ದರು. ಆದರೆ ಪಾಠ ಹೇಳುತ್ತ, ಹೇಳುತ್ತ ಕೃಷ್ಣಲೀಲೆಯನ್ನು ಬಣ್ಣಿಸುತ್ತಿದ್ದರು. ಶಿಷ್ಯರು ಕೂಡ ಬಾಹ್ಯ ಪ್ರಜ್ಞೆ ಮರೆತು ಕುಳಿತು ಕೇಳುತ್ತಿದ್ದರು. ಎಲ್ಲ ಮುಗಿದು ಎಚ್ಚರಗೊಂಡಾಗ ತಾವು ಕೇಳಿದ್ದು ಕೃಷ್ಣ ಕಥೆಯೆಂದರಿತು, ಅವರೆಲ್ಲ ಮತ್ತೆ ಪಾಠಕ್ಕೆ ಒತ್ತಾಯಿಸುತ್ತಿದ್ದರು. ಕೊನೆಗೊಮ್ಮೆ ವಿಶ್ವಂಭರ 'ನಾನು ನಿಮಗೆ ಪಾಠ ಹೇಳಲಾರೆ. ನನಗೆ ಯಾವಾಗಲೂ ಕೃಷ್ಣನೇ ಕಾಣಿಸಿಕೊಳ್ಳುತ್ತಾನೆ. ಅವನನ್ನು ಹೊಗಳಬೇಕು, ಅವನನ್ನು ಕುರಿತು ಹಾಡಬೇಕು ಎನ್ನಿಸುತ್ತದೆ. ಆದ್ದರಿಂದ ನೀವು ಬೇರೆಯವರಿಂದ ಪಾಠ ಹೇಳಿಸಿಕೊಳ್ಳಿ" ಎಂದು ಹೇಳಿ ಅವರನ್ನೆಲ್ಲ ಕಳುಹಿಸಿಬಿಟ್ಟ.

ಹೀಗೆ ಉಪಾಧ್ಯಾಯ ವೃತ್ತಿಯಿಂದ ನಿವೃತ್ತಿ ಹೊಂದಿದ ಮೇಲೆ ವಿಶ್ವಂಭರ ಕೃಷ್ಣ ಸಂಕೀರ್ತನೆಯನ್ನು ಪ್ರಾರಂಭಿಸಿದ. ಪ್ರತಿದಿನ ರಾತ್ರಿ ನವದ್ವೀಪದ ವೈಷ್ಣವರೆಲ್ಲರೂ ಅವನ ಮನೆಯಲ್ಲಿ ಸೇರಿ ಭಜನೆ ಮಾಡಲಾರಂಭಿಸಿದರು. ಅದೇ 'ಚೈತನ್ಯ ಸಂಪ್ರದಾಯ'ವಾಗಿ ಬೆಳೆಯಿತು. ದಿನಗಳೆದಂತೆ ಅಲ್ಲಿ ಸೇರುವ ಭಕ್ತರ ಸಂಖ್ಯೆ ಹೆಚ್ಚಿತು. ಜನರೆಲ್ಲ ವಿಷ್ಣುಭಕ್ತರಾದರು. ವಿಶ್ವಂಭರ ಕೃಷ್ಣನ ಅವತಾರವೇ ಎಂದು ಜನ ಭಾವಿಸಿದರು. ವಿಶ್ವಂಭರ ಜನರಲ್ಲಿ ಕೃಷ್ಣಭಕ್ತಿಯನ್ನು ತುಂಬಲು ಯೋಜಿಸಿ ನಗರ ಸಂಕೀರ್ತನೆಯನ್ನು ಪ್ರಾರಂಭಿಸಿದರು. ಅದರಲ್ಲಿ ಅನೇಕ ಜನರು ತಮ್ಮ ಜಾತಿ–ಮತ–ಪಂಥ–ಪಂಗಡ–ಅಂತಸ್ತುಗಳನ್ನು ಮರೆತು ವಿಧ ವಿಧ ವಾದ್ಯಗಳನ್ನು ಬಾರಿಸುತ್ತ, ಭಕ್ತಿಭಾವದಿಂದ ನಗರದೆಲ್ಲೆಲ್ಲ ಹಾಡುತ್ತ ಕುಣಿಯುತ್ತ ಸಂಚರಿಸುತ್ತಿದ್ದರು. ಇವರ ದಿನ ನಿತ್ಯದ ನಗರ ಸಂಕೀರ್ತನೆಯನ್ನು ಕಂಡು ಕೇಳಿ ಸಹಿಸದ ನವದ್ವೀಪದ ನವಾಬನು ಅದನ್ನು ಪ್ರತಿಬಂಧಿಸಿ ಆಜ್ಞೆಯನ್ನು ಹೊರಡಿಸಿದನು. ಆದರೆ ವಿಶ್ವಂಭರ ಅದಕ್ಕೆ ಹೆದರದೆ, ಮರುದಿನ ತನ್ನ ಸಮಸ್ತ ಶಿಷ್ಯರನ್ನು, ಅನುಯಾಯಿಗಳನ್ನು ಕರೆದುಕೊಂಡು ನವಾಬನ ಮನೆಯೆದುರಿಗೆ ಬರಲು, ಅವರ ಭಕ್ತಿ ಭಾವ ಕಂಡು ಕಂಗಿ ಹೋದ ನವಾಬನು ಅವರಲ್ಲಿ ಕ್ಷಮೆಯಾಚಿಸಿದನು. ವಿಶ್ವಂಭರ ಅವನಿಗೂ ಕೃಷ್ಣಭಕ್ತಿಯ ಮಹಿಮೆ ತಿಳಿಸಿ ಉಪದೇಶ ನೀಡಿದನು

ಸಂಸಾರದಲ್ಲಿದ್ದುಕೊಂಡು ಸಂಪೂರ್ಣ ಕೃಷ್ಣ ಭಕ್ತಿಯನ್ನು ಸಾಧಿಸಲು ಶಕ್ಯವಾಗಲಿಲ್ಲವೆಂದುಕೊಂಡು ವಿಶ್ವಂಭರರು ಸಂನ್ಯಾಸಿಯಾಗಲು ತಾಯಿಯ ಒಪ್ಪಿಗೆ ಕೇಳಿ ಪಡೆದರು. ನಂತರ ಗಂಗೆಯನ್ನು ಈಜಿ ಕಾಚ್ವಾ ಸೇರಿ, ಅಲ್ಲಿದ್ದ ಕೇಶವ ಭಾರತಿಯವರನ್ನು ಕಂಡು ಸಂನ್ಯಾಸದೀಕ್ಷೆ ಕೊಡುವಂತೆ ಕೇಳಿದರು. ಇವರ ಸಾತ್ವಿಕರೂಪ, ಭಕ್ತಿ ಪರವಶತೆ ಕಂಡ ಕೇಶವಭಟ್ಟರು ಸಂತೋಷದಿಂದ ಮಂತ್ರದೀಕ್ಷೆ ನೀಡಿದರು. ಜೊತೆಗೆ 'ಶ್ರೀಕೃಷ್ಣ ಚೈತನ್ಯ' ಎಂಬ ಹೆಸರನ್ನಿಟ್ಟರು. ಶ್ರೀಕೃಷ್ಣ ಚೈತನ್ಯ ಎಂದರೆ 'ಎಲ್ಲರ ಹೃದಯದಲ್ಲಿ ಶ್ರೀಕೃಷ್ಣನನ್ನು ಎಚ್ಚರಗೊಳಿಸುವದು' ಎಂದರ್ಥ.

ವಿಶ್ವಂಭರರು ಶ್ರೀಕೃಷ್ಣ ಚೈತನ್ಯರಾದ ಮೇಲೆ ಶ್ರೀಕೃಷ್ಣನನ್ನು ಕಾಣಲು ಪುರಿಗೆ ಹೊರಟರು. ಪುರಿಯ ಜಗನ್ನಾಥ ವಿಗ್ರಹ ಕಂಡು ಪುಳಕಿತರಾಗಿ ಮೂರ್ಛೆ ಹೊಂದಿದರು. ಅವರ ಈ ಸ್ಥಿತಿಯನ್ನು ಕಂಡು ಚಕಿತಗೊಂಡ ಶ್ರೀ ವಾಸುದೇವ ಸಾರ್ವಭೌಮ ಎಂಬ ಪಂಡಿತರು ಅವರನ್ನು ತಮ್ಮ ಮನೆಯಲ್ಲಿಟ್ಟುಕೊಂಡು ಸೇವಿಸಿದರು. ಚೈತನ್ಯರು ಸಾರ್ವಭೌಮರಿಂದ ವೇದಾಂತ ಸೂತ್ರಗಳನ್ನು ಕಲಿತರು. ನಂತರ ಅವರಿಗೆ "ಭಗವಂತನ ಭಕ್ತಿಯೇ ಜೀವನದ ಮುಖ್ಯಗುರಿ. ಭಾಗವತದಲ್ಲಿ ಹೇಳಿರುವ ಹಾಗೆ ಪ್ರಾಪಂಚಿಕ ಸುಖಗಳನ್ನು ತ್ಯಜಿಸುವ ಸಾಧುಗಳು ಭಗವಂತನಲ್ಲಿ ಅಗೋಚರವಾದ ಭಕ್ತಿಯನ್ನು ಹೊಂದಿರುತ್ತಾರೆ" ಎಂಬ ಸಂದೇಶವನ್ನು ನೀಡಿ, ಸಾರ್ವಭೌಮರಿಗೆ ಚತುರ್ಭುಜಧಾರಿಯಾದ ವಿಷ್ಣುವಿನ ರೂಪದಲ್ಲಿ ದರ್ಶನ ನೀಡಿದರು

1510 ರಲ್ಲಿ ಚೈತನ್ಯರು ಕೃಷ್ಣದಾಸ ಎಂಬ ಶಿಷ್ಯನೊಂದಿಗೆ ದಕ್ಷಿಣ ಭಾರತದ ಕ್ಷೇತ್ರಗಳಿಗೆ ಯಾತ್ರೆ ಹೊರಟರು. ಚೈತನ್ಯರು ಹೋದಲ್ಲೆಲ್ಲ ಅಸಂಖ್ಯಜನರ ಗುಂಪೇ ಸೇರುತ್ತಿತ್ತು. ಅವರ ಮೃದುನುಡಿ, ಮಧುರಭಾವ, ಅಗಾಧ ಭಕ್ತಿಗಳು ಜನರನ್ನು ಅತಿಯಾಗಿ ಆಕರ್ಷಿಸುತ್ತಿದ್ದವು. ಅವರು ರಾಮೇಶ್ವರ ತಲುಪುವ ವೇಳೆಗೆ ಅಸಂಖ್ಯ ಜನಗಳು ಕೃಷ್ಣಭಕ್ತರಾದರು. ವೈಷ್ಣವ ಸಂಪ್ರದಾಯ ದಕ್ಷಿಣ ಭಾರತದಲ್ಲೂ ಹರಡಿತು. ಶ್ರೀಕಾಕುಲಮ್ ಹತ್ತಿರವಿರುವ ಕೂರ್ಮಾಚಲಮ್‌ದಲ್ಲಿರುವ ಕೂರ್ಮದೇವ ಮಂದಿರದಲ್ಲಿ ಶ್ರೀ ಚೈತನ್ಯರು ಭಕ್ತಿಭಾವಪೂರಿತ ನೃತ್ಯ–ಸಂಕೀರ್ತನೆಗಳಿಂದ ಜನರಲ್ಲಿ ಕೃಷ್ಣಭಕ್ತಿಯ ಜ್ಯೋತಿ ಬೆಳಗಿದರು. ಅಲ್ಲಿದ್ದ ವಸುದೇವ ಎಂಬ ಕುಷ್ಠರೋಗಿಯ ರೋಗ ನಿವಾರಿಸಿ ಲೀಲೆ ತೋರಿದರು. ಮುಂದೆ ಕಾಂಚಿಪುರಮ್‌ದಲ್ಲಿಯ ವರದರಾಜ ಸ್ವಾಮಿಯ ಮಂದಿರದಲ್ಲಿಯೂ ನೆರೆದ ಜನರಿಗೆ ಭಕ್ತಿಯ ಶ್ರೇಷ್ಠತೆಯ ದರ್ಶನ ಮಾಡಿಸಿದರು. ಶ್ರೀರಂಗಪಟ್ಟಣದ ಶ್ರೀರಂಗನಾಥ ದೇವಾಲಯದಲ್ಲಿ ನೆರೆದ ಪಂಡಿತರಿಗೆಲ್ಲ ವೈಷ್ಣವ ಸಂಪ್ರದಾಯದ ಮಹತ್ತ್ವ ತಿಳಿಸಿದರು. ಉಡುಪಿಯ ಶ್ರೀಕೃಷ್ಣ ಮಂದಿರದಲ್ಲಿ ಶ್ರೀ ರಘುವರ್ಯ ತೀರ್ಥರ ಜೊತೆಗೆ ಭಕ್ತಿ ಶ್ರೇಷ್ಠತೆ ಬಗ್ಗೆ ವಾದ ಮಾಡಿದರು. ಮಹಾರಾಷ್ಟ್ರದ ಪಂಢರಪುರದಲ್ಲಿ ಕೂಡ ಇವರು ತಮ್ಮ ಭಕ್ತಿ ಸಂಪ್ರದಾಯ ಮತ್ತು ನಾಮ ಸಂಕೀರ್ತನೆಯನ್ನು ಹರಡಿದರು. 1511 ರಲ್ಲಿ ಪುರಿಗೆ ಹಿಂದಿರುಗಿದರು.

ಪುರಿಯ ಜಗನ್ನಾಥ ದೇವಾಲಯದ ರಥೋತ್ಸವದ ಹಿಂದಿನ ದಿನ ಸ್ವತಃ ಚೈತನ್ಯರೇ ತಮ್ಮ ಶಿಷ್ಯರೊಂದಿಗೆ ಜಗನ್ನಾಥ ಮಂದಿರವನ್ನು ಶುಚಿಗೊಳಿಸಿದರು. ಸೇವೆ ಎಂಥದಿದ್ದರೂ ಅದು ದೇವರಿಗೆ ಅರ್ಪಣಾಭಾವದಿಂದ ಮಾಡಿದರೆ ಅವನಿಗೆ ಪ್ರೀತಿಯುಳ್ಳದ್ದಾಗುತ್ತದೆಂಬುದನ್ನು ತೋರಿಸಿಕೊಟ್ಟರು. ಈ ಪದ್ಧತಿಯನ್ನು ಅಲ್ಲಿಯ ವೈಷ್ಣವಭಕ್ತರು ಇಂದಿಗೂ ಮುಂದುವರೆಸಿಕೊಂಡು ಬಂದಿದ್ದಾರೆ.

ಚೈತನ್ಯರು ತಮ್ಮ ಬೋಧನೆಯನ್ನು ಪ್ರಾರಂಭಿಸಿದ್ದು ಪುರಿಯಲ್ಲಿದ್ದಾಗಲೇ, ಹಿಂದುಗಳು, ಮಹಮ್ಮದಿಯರು, ಬಡವರು, ಬಲ್ಲಿದರು, ಸ್ತ್ರೀಯರು, ಮಕ್ಕಳು–ಹೀಗೆ ಅನೇಕರು ಅವರ ಶಿಷ್ಯರಾದರು. 'ಪೀರ್' ಎಂಬ ಮಹಮ್ಮದೀಯ ಇವರ ಶಿಷ್ಯನಾಗಿ 'ರಾಮದಾಸ' ನೆಂದು ಪ್ರಸಿದ್ಧನಾದ. ಬಿಜಲೀದಾಸ' ನೆಂಬವ 'ಮಹಾಭಾಗವತ' ನೆನಿಸಿದ. ಚೈತನ್ಯರು ಕೃಷ್ಣಲೀಲಾ ಕ್ಷೇತ್ರಗಳಾದ ಮಥುರಾ, ಬೃಂದಾವನಗಳಿಗೆ ಯಾತ್ರೆ ಮಾಡಿ ಅವುಗಳ ಜೀರ್ಣೋದ್ಧಾರಕ್ಕೆ ಪ್ರೇರಕರಾದರು.

ಚೈತನ್ಯರು ದಿನ ಬೆಳೆದಂತೆ 'ಕೃಷ್ಣಮಯ'ರಾಗತೊಡಗಿದರು. ಕೃಷ್ಣಪೂಜೆ ಮತ್ತು ಕೃಷ್ಣಧ್ಯಾನದಲ್ಲೇ ಕಾಲಕಳೆಯುತ್ತಿದ್ದರು, ಮಲಗುವವರೆಗೂ ಸಹ ಕೃಷ್ಣ ಭಜನೆಗಳನ್ನು ಹಾಡಿ ಭಾವ ವಶರಾಗುತ್ತಿದ್ದರು. ಒಂದುದಿನ ಅವರು ಇದ್ದಕ್ಕಿದ್ದಂತೆ ದೇವಸ್ಥಾನದ ಕಡೆಗೆ ಓಡ ತೊಡಗಿದರು. ಅದರ ಬಾಗಿಲಬಳಿ ಜ್ಞಾನ ತಪ್ಪಿಬಿದ್ದುಬಿಟ್ಟರು. ಅವರ ಬಾಯಿಂದ ನೊರೆ ಬರುತ್ತಿತ್ತು. ಅವರು

(34ನೇ ಪುಟ ನೋಡಿ)

# ಶ್ರೀ ಪ್ರಸನ್ನ ವೆಂಕಟದಾಸರು

ಕರ್ನಾಟಕದ ಸಂಸ್ಕೃತಿಗೆ ಹರಿದಾಸರು ಕೊಟ್ಟ ಕೊಡುಗೆ ಮಹತ್ವಪೂರ್ಣವಾದುದು. ಹರಿದಾಸರು ವೇದಶಾಸ್ತ್ರಗಳಲ್ಲಿ ಅಡಗಿದ ನಿತ್ಯ ಸತ್ಯಗಳನ್ನೂ, ತಮಗಾದ ಅನುಭವಗಳನ್ನೂ ಉಗಾಭೋಗ, ಸುಳಾದಿ, ಕೀರ್ತನೆಗಳ ಮೂಲಕ ಶ್ರೀಸಾಮಾನ್ಯರಿಗೆ ಅರುಹಿದರು. ಹರಿದಾಸವಾಙ್ಮಯ ಮತ ಮತ್ತು ಭಕ್ತಿ-ತತ್ವಗಳ ಪ್ರಚಾರಕ್ಕಾಗಿಯೇ ಜನ್ಮ ತಾಳಿದುದಾದರೂ ವಸ್ತು ಮತ್ತು ಶೈಲಿಗಳಿಂದಾಗಿ ವಿಶಿಷ್ಟ ಕಾವ್ಯವೆಂದು ಪರಿಗಣಿತವಾಗಿದೆ. ದಾಸಸಾಹಿತ್ಯ ಸಾರ್ವಭೌಮರಾದ ಪುರಂದರದಾಸರ (ಕ್ರಿ. ಶ. 1550) ಜೀವನ ಮತ್ತು ಕೃತಿಗಳಿಂದ ಪ್ರಭಾವಿತರಾಗಿ ಜನತೆಯನ್ನು ಧಾರ್ಮಿಕ ಜೀವನದತ್ತ ಒಯ್ಯುವುದರಲ್ಲಿ ಸಫಲರಾದ ದಾಸಶ್ರೇಷ್ಠರ ಪೈಕಿ ಪ್ರಸನ್ನ ವೆಂಕಟದಾಸರೂ ಒಬ್ಬರು.

ಪ್ರಸನ್ನ ವೆಂಕಟದಾಸರ ಹಿರಿಯರು ಬಿಜಾಪುರ ಜಿಲ್ಲೆಗೆ ಸೇರಿದ ಬಾಗಲಕೋಟೆ ತಾಲ್ಲೂಕಿನ ಕಾಖಂಡಕಿ ಗ್ರಾಮಕ್ಕೆ ಸೇರಿದವರು. ತಂದೆ ಕಾಖಂಡಕಿ ನರಸಪ್ಪಯ್ಯ, ತಾಯಿ ಲಕ್ಷ್ಮೀಬಾಯಿ ಈ ದಂಪತಿಗಳಿಗೆ ಇಬ್ಬರು ಗಂಡು ಮಕ್ಕಳು. ಈ ಪೈಕಿ ಕಿರಿ ಮಗನೇ ಕಾಲಾನಂತರದಲ್ಲಿ ಪ್ರಸನ್ನ ವೆಂಕಟದಾಸರೆಂದು ಪ್ರಸಿದ್ಧ ಪುರುಷನಾದ ವೆಂಕಟೇಶ. ಇವನನ್ನು ಮನೆಯಲ್ಲಿ ವೆಂಕಟಪ್ಪಯ್ಯನೆಂದು ಕರೆಯುತ್ತಿದ್ದರು. ವೆಂಕಟಪ್ಪಯ್ಯನ ಜನನ ಕಾಲ ಖಚಿತವಾಗಿ ತಿಳಿದು ಬಂದಿಲ್ಲ. ಕ್ರಿ. ಶ. 1680 ಎಂಬುದಾಗಿ ಡಾ|| ಎ. ಟಿ ಪಾಟೀಲರು ಅಭಿಪ್ರಾಯ ಪಟ್ಟಿದ್ದಾರೆ.

ವೆಂಕಟಪ್ಪಯ್ಯನ ಬಾಲ್ಯದ ದಿನಗಳು ಕಷ್ಟಕರವಾಗಿದ್ದವು. ತಂದೆತಾಯಿಗಳನ್ನು ಚಿಕ್ಕಂದಿನಲ್ಲೇ ಕಳೆದು ಕೊಂಡದ್ದರಿಂದ, ಇವನ ಪಾಲನೆಯ ಹೊಣೆ ಅಣ್ಣನ ಮೇಲೆ ಬಿದ್ದಿತು. ಅಣ್ಣ ವಿವಾಹಿತ. ಅತ್ತಿಗೆಗೆ ವೆಂಕಪ್ಪಯ್ಯನ ಮೇಲೆ ಅಕ್ಕರೆ ಇರಲಿಲ್ಲ. ಆಕೆ ಹೊತ್ತು ಹೊತ್ತಿಗೆ ಊಟ ಹಾಕುತ್ತಿರಲಿಲ್ಲ. ಹುಡುಗ ವೆಂಕಪ್ಪಯ್ಯ ದನ ಮೇಯಿಸುವುದರಲ್ಲಿ ಕಾಲ ಕಳೆಯುತ್ತಿದ್ದ. ಒಂದು ದಿನ ಬೇಸಗೆಯ ಬೇಗೆ ತಾಳಲಾರದೆ ಅತ್ತಿಗೆಯನ್ನು ಕುಡಿಯಲು ಮಜ್ಜಿಗೆಯನ್ನು ಕೇಳಿದ ವೆಂಕಪ್ಪಯ್ಯನಿಗೆ ದೊರಕಿದ್ದು ಅತ್ತಿಗೆಯ ಅವಹೇಳನ. ಇದರಿಂದ ಬಲುನೊಂದ ವೆಂಕಪ್ಪಯ್ಯನಿಗೆ ಅಣ್ಣ ಅತ್ತಿಗೆಯರ ಆಶ್ರಯದಲ್ಲಿ ಇರುವುದು ಇನ್ನು ಸಾಕು ಎನಿಸಿತು. ತನ್ನ ಆರಾಧ್ಯ ದೈವ ತಿರುಪತಿ ವೆಂಕಟರಮಣ ಕೂಗಿ ಕರೆದಂತಾಯ್ತು. ತಕ್ಷಣವೆ ತಿರುಪತಿಗೆ ಹೋಗುವನೆಂದು ಅತ್ತಿಗೆಗೆ ನುಡಿದು ಪ್ರಯಾಣ ಹೊರಟು ವೆಂಕಟರಮಣನ ದಿವ್ಯಮೂರ್ತಿ ಇದ್ದೆಡೆಗೆ ಬಂದು, ಮೂರ್ತಿಯನ್ನು ನೋಡಿ ಭಾವಪರವಶನಾದ. ಇಲ್ಲಿಯೇ ವೆಂಕಟಪ್ಪಯ್ಯನಿಗೆ ಭಗವಂತನ ಸಾಕ್ಷಾತ್ಕಾರವಾಯಿತು. 'ಪ್ರಸನ್ನ ವೆಂಕಟ' ಎಂಬ ಅಂಕಿತವನ್ನಿಟ್ಟುಕೊಂಡು ಭಾವೋದ್ವೇಗದಿಂದ ಹಾಡಿ ಜನರಿಗೆ ಅಚ್ಚರಿಯ ವ್ಯಕ್ತಿಯೆನಿಸಿದರು. ಕೆಲಕಾಲ ತಿರುಪತಿಯಲ್ಲಿ ತಂಗಿದರು ಮುದ್ಗಲ ಜನಾರ್ಧನಾಚಾರ್ಯರಿಂದ ಸಂಸ್ಕೃತ ಕಲಿತರು. ಕಾವ್ಯ ಭಾಗವತಗಳನ್ನು ಅಧ್ಯಯನ ಮಾಡಿದರು, ಆ ಮೂಲಕ ದಿವ್ಯದರ್ಶನವನ್ನು ಪಾಂಡಿತ್ಯವನ್ನೂ ಪಡೆದರು. ತರುವಾಯ ಜನಮನದ ಕತ್ತಲೆಯನ್ನು ಕಳೆಯಲು ಹರಿಭಕ್ತಿ ಪ್ರಸಾರವನ್ನು ಕೈಗೊಂಡರು.

ಪ್ರಸನ್ನ ವೆಂಕಟದಾಸರ ಕೃತಿಗಳು ಉತ್ತಮ ಸಾಹಿತ್ಯಕ ಗುಣಗಳಿಂದ ಪಂಡಿತರನ್ನೂ ಪಾಮರರನ್ನೂ ಆಕರ್ಷಿಸಿವೆ. 'ಪ್ರಸನ್ನ ವೆಂಕಟ' ಎಂಬ ಅಂಕಿತವನ್ನೊಳಗೊಂಡಿರುವ ಸುಮಾರು ನಾನೂರು ಪದಗಳು ಸಿಕ್ಕಿವೆ. ಈ ಪೈಕಿ ಐದು ಉಗಾಭೋಗಗಳು ಮೂರು ಸುಳಾದಿಗಳು ಇವೆ. ಪ್ರಸನ್ನ ವೆಂಕಟದಾಸರ ಉಪಲಬ್ಧ ಕೃತಿಗಳಿವು;

1 ಸಮಸ್ತನಾಮ ಮಣಿಗಣ ಷಟ್ಚರಣ ಪದ್ಯಮಾಲಾ

2. ನಾರದರು ಕೊರವಂಜಿ ವೇಷ ತಾಳ್ದ ಚರಿತ್ರೆ

3. ನಾರಾಯಣ ಪಂಜರ.

4. ಸತ್ಯಭಾಮಾ ವಿಲಾಪ (ಶ್ರೀ ಕೃಷ್ಣ ಪಾರಿಜಾತ)

5. ಭಾಗವತ

ಇವೇ ಅಲ್ಲದೆ ಇನ್ನೂ ಕೆಲವು ಕೃತಿಗಳನ್ನು ಬರೆದಿರುವ ಸಾಧ್ಯತೆ ಉಂಟೆಂದು ದಾಸ ಸಾಹಿತ್ಯ ಪಂಡಿತರು ಊಹಿಸಿದ್ದಾರೆ.

ಸಮಸ್ತನಾಮ ಮಣಿಗಣ ಷಟ್ ಪದ್ಯಮಾಲಾ: ಇದರಲ್ಲಿ ನುಡಿಗಳ ಸಂಖ್ಯೆ 71. ಪ್ರಾರಂಭದ 13 ನುಡಿಗಳಲ್ಲಿ ದೇವರ ಸ್ತೋತ್ರ ಇದೆ. 14 ನೆಯ ನುಡಿಯಲ್ಲಿ ಸ್ವರ, ಅನುಸ್ವರ, ವಿಸರ್ಗಗಳನ್ನೂ 15 ಮತ್ತು 16 ನೆಯದರಲ್ಲಿ ವ್ಯಂಜನಗಳನ್ನೂ (ವರ್ಗೀಯ ಮತ್ತು ಅವರ್ಗೀಯ) ಕುರಿತು ಹೇಳಲಾಗಿದೆ. 17–47 ರ ವರೆಗೆ ನುಡಿಗಳಲ್ಲಿ ಕಾಗುಣಿತವನ್ನು ತರುವಾಯ 57 ನೆಯ ನುಡಿಯವರೆಗೆ ಅಂಕಿಗಳ ಬಗೆಗೆ ವಿವರಣೆ ನೀಡಲಾಗಿದೆ. 58–62 ನೇ ನುಡಿಗಳಲ್ಲಿ ಪಂಚಮಹಾಭೂತಗಳಾದ ಕ್ಷಿತಿ, ಅಂಬು, ಅಗ್ನಿ, ವಾತ ಮತ್ತು ಅಂಬರಗಳ ವಿವರಣೆಯಿದೆ. 63 ನೆಯ ನುಡಿಯಲ್ಲಿ ಶಬ್ದದ ಪ್ರಸ್ತಾಪವಿದೆ. 64 ನೆಯದರಲ್ಲಿ ಮೇಷ, ವೃಷಭ ಮುಂತಾದ ಹನ್ನೆರಡು ರಾಶಿಗಳನ್ನು ಕುರಿತು ಹೇಳಲಾಗಿದೆ. 65–66 ರಲ್ಲಿ ಇಪ್ಪತ್ತೇಳು ನಕ್ಷತ್ರಗಳನ್ನು ಕುರಿತ ವಿವರಣೆಯಿದೆ. 67–69 ರ ವರೆಗಿನ ನುಡಿಗಳಲ್ಲಿ ದಶಾವತಾರದ ವರ್ಣನೆಯಿದೆ, 70 ನೆಯದರಲ್ಲಿ ದೇವರ ಸ್ತೋತ್ರವೂ 71 ನೆಯ ನುಡಿಯಲ್ಲಿ ವೆಂಕಟೇಶನ ಸ್ತುತಿಯೂ ಇದೆ. ಪ್ರಸ್ತುತ ಕೃತಿಯಲ್ಲಿಯ ನುಡಿಗಳನ್ನು ಓದಿದಾಗ ಪ್ರಸನ್ನ ವೆಂಕಟದಾಸರಿಗೆ ಇದ್ದ ಸಂಸ್ಕೃತ ಮತ್ತು ಕನ್ನಡ ಭಾಷಾಜ್ಞಾನದ ಅರಿವುಂಟಾಗುತ್ತದೆ.

ನಾರದರು ಕೊರವಂಜಿ ವೇಷ ತಾಳ್ದ ಚರಿತ್ರೆ: ಇದರಲ್ಲಿ 34 ಪದಗಳಿವೆ. ಇವು ಬೇರೆ ಬೇರೆ ರಾಗಗಳಲ್ಲಿವೆ. ಶ್ರೀಕೃಷ್ಣನನ್ನು ವಿವಾಹವಾಗಬೇಕೆಂಬ ಅಪೇಕ್ಷೆಯಿರುವ ರುಕ್ಮಿಣಿ ಯನ್ನು ಆಕೆಯ ಅಣ್ಣ, ಶಿಶುಪಾಲ

ಶ್ರೀ ಆರ್. ರಾಮಕೃಷ್ಣ

ನಿಗೆ ವಿವಾಹ ಮಾಡಿ ಕೊಡುವ ಸಿದ್ಧತೆಯಲ್ಲಿ ಇರುತ್ತಾನೆ. ಆ ಸಮಯದಲ್ಲಿ ನಾರದರು ಕೊರವಂಜಿ (ಕೊರವಿ) ವೇಷ ಧರಿಸಿ ಬಂದು ರುಕ್ಮಿಣಿಯನ್ನು ಕಂಡು ಆಕೆಯ ಮನೋಭಿಲಾಷೆ ಸಿದ್ಧಿಸುವುದೆಂದು ಹೇಳುವ ಸನ್ನಿವೇಶವೇ ಈ ಕೃತಿಯ ವಸ್ತು. ಪ್ರಾರಂಭದ ಎರಡು ಪದಗಳಲ್ಲಿ ವಿಷ್ಣುವನ್ನು ಸ್ತುತಿಸಲಾಗಿದೆ. ರುಕ್ಮಿಣಿಯ ಜನನ, ಬಾಲ್ಯ, ಯೌವನ, ವಿವಾಹದ ಪ್ರಸ್ತಾಪ ಇವನ್ನು ಮೂರನೆಯ ಪದದಲ್ಲಿ ಬಲು ಸಂಕ್ಷಿಪ್ತವಾಗಿ ಹೇಳಲಾಗಿದೆ. ತರುವಾಯ ನಾರದರು ಕೊರವಂಜಿ ವೇಷ ತಾಳಿ ಬರುತ್ತಾರೆ. ಕೊರವಂಜಿಯ ವೇಷ ಭೂಷಣಗಳ ವರ್ಣನೆ, ಒಂದು ಉತ್ತಮ ಶಬ್ದ ಚಿತ್ರವಾಗಿದೆ.

ಮಂಜುಗಾವಿಯ ಸೀರಿ ನೀರಿ ತೆಗೆದುಟ್ಟು।
ಕೆಂಜಾಡೆ ಬಿಟ್ಟೋರೆ ದುರುಬೀನ ಕಟ್ಟು॥
ಪಂಜಿನೋಲೆಯ ಮೂಗುತಿ ಬಾಲೆ
ಇಟ್ಟು ಗುಲ।
ಗಂಜಿ ಹೊಂದಾಳೆ ಸರಗಳ ಅಳವಟ್ಟು॥
ಚಂಚಲ ನೇತ್ರ ಕಂಜನ ಬಾವುಲಿಟ್ಟು।
ಮಿಂಚುವ ಆಭರಣಗಳನ್ನು ತೊಟ್ಟು॥

(ಶ್ರೀ ಪ್ರಸನ್ನ ವೆಂಕಟದಾಸರ ಕೀರ್ತನೆಗಳು, ಪು 95–96)

ಕೊರವಂಜಿಯು ರಾಜಬೀದಿ, ಬ್ರಾಹ್ಮಣರ ಬೀದಿಗಳನ್ನು ಹಾದು ನೃಪನ ಅರಮನೆಗೆ ಬಂದಳು. ಈಕೆ ಬಂದ ಸುದ್ದಿ ಕೇಳಿ ಪೂರ್ಣೇಂದುವದನೆ ರುಕ್ಮಿಣಿ ಮುದತಾಳಿ ತನ್ನ ಮಂದಿರಕ್ಕೆ ಕರೆಸಿಕೊಳ್ಳುತ್ತಾಳೆ. ರುಕ್ಮಿಣಿಯ ರೂಪವನ್ನು ಕಂಡ ಕೊರವಂಜಿ ನುಡಿಯುವ ಕೆಲವು ನುಡಿಗಳಿವು:

ಎಲೆಲೆ ಎಳೆವೆಂಗಳೆ ಎಲೆ ಹುಲ್ಲೆಗಂಗಳೆ।
ಮಹಾಭೂಷಣದ ಮೂರು ವೇಣಿ॥
ಮಡದಿಯರ ಸುಪ್ರಾಣೆ।
ಕೀರವಾಣಿ ಕಿಸಲಯಪಾಣಿ।
ಕಂಜಜಬಿಂಬ ಸದನೆ।
ಕಲಶ ಮಣಿರದನೆ।
ಮದನ ಕಾರ್ಮುಕೋಪಮ
ಭ್ರೂಲತೆಯಳೆ।
ಮಹಾಲಕುಮಿಯಳೆ।
ಅರುಣ ವಿದ್ರುಮಾಧರೆ।............
ಬುಗುಡೆ ಜಳತುಂಬ ಕೊಪ್ಪಿನ ಕಿವಿಯಳೆ
ಬಾವಲಿನಾ ಗೋತ್ರ ಪೊಂಬರಳೆಲೆ
ಲಲಿತ ಬಾಹುಲತೆಯಳೆ॥
ಲಸತ್ ವನಜ ಕೋರಕ ಸ್ತನಯಳೆ।
ಕಡು ತಳೋದರೆ॥
ನಿಮ್ನ ನಾಭಿಯುಳೆ ಕಂಠೀರವ
ಕಟಿಯಳೆ।..........
ಬಾಣಪಂಚಕನ ಬತ್ತಳಿಕೆಯ ಜಂಘೆಯಳೆ
ಕೋಮಲತರಾಂಘ್ರಿ ಸರಸಜಯುಗಳೆ।
ಮದಗಜಮನೆ। ಪ್ರತಿಯಿಲ್ಲದ ರನ್ನದ
ಬೊಂಬೆ।

(–ಶ್ರೀ ಪ್ರ ವೆಂ. ಕೀ. ಪು. 101–102)

ಮೇಲಿನ ವರ್ಣನೆಯಲ್ಲಿ ಅಡಕವಾಗಿರುವ ಸಂಸ್ಕೃತ ಮಿಶ್ರಿತ ಶಬ್ದ ಸಂಪತ್ತು ಓದುಗದ ಹೃದಯವನ್ನಾಕರ್ಷಿಸುತ್ತದೆ. ಆಹ್ಲಾದವನ್ನೀಯುತ್ತದೆ.

ನಾರಾಯಣ ಪಂಜರ: ಈ ಕೃತಿಯಲ್ಲಿ ನಾರಾಯಣನನ್ನು ಸ್ತುತಿಸುವ 41 ನುಡಿಗಳಿವೆ. ಸಂಸ್ಕೃತದಲ್ಲಿ 'ನಾರಾಯಣ ಕವಚ' ಇದ್ದಂತೆ ಪ್ರಸನ್ನ ವೆಂಕಟದಾಸರು ಕನ್ನಡದಲ್ಲಿ ನಾರಾಯಣನನ್ನು ಸ್ತುತಿಸಿದ್ದಾರೆ. 'ನಾರಾಯಣನು ನಾದಲೋಲ' ಎಂಬುದಾಗಿ ದಾಸರು ಭಾವಿಸಿ ಇಲ್ಲಿಯ ನುಡಿಗಳನ್ನು ರಚಿಸಿರುವಂತೆ ತೋರುತ್ತದೆ, ಕೃತಿಯ ಆರಂಭದ ಸಾಲುಗಳಾದ 'ನಾರಾಯಣಾಯ ನಮೋ ನಾರಾಯಣ' ........ ಎಂಬುವು ಪ್ರತಿಯೊಂದು ನುಡಿಯ ಅಂತ್ಯದಲ್ಲಿ ಆವೃತ್ತಿಯಾಗಿವೆ.

ನಿನ್ನ ಮೈಬೆಮರಿನ್ಹೊಳೆಯುಲ್ಲೆನ್ನ
ಮುಳುಗಿಸಿ।
ನಾರಾಯಣಾಯ ನಮೋ ನಾರಾಯಣ॥
ನಿನ್ನವ ನಾ ನಿನ್ನವರ ಕೈಯಲ್ಲಿ ಕೊಡು
ಬೇಗ।
ನಾರಾಯಣಾಯ ನಮೋ ನಾರಾಯಣ॥
ವಾರಿಯಲಿ ಭೂಮಿಯಲಿ ಅಡವಿಯಲ್ಲೊ
ಕಾಯೋ।
ನಾರಾಯಣಾಯ ನಮೋ ನಾರಾಯಣ॥

33ನೇ ಪುಟ ನೋಡಿ)

# ನಾಗಪಂಚಮಿ

ಶ್ರೀ ಪಿ. ವಿ. ಕೃಷ್ಣತಂತ್ರಿ

ಶ್ರಾವಣ ಶುದ್ಧ ಐದು ನಾಗಪಂಚಮಿ, ನಾಗರ ಪಂಚಮೀ – ಈ ಹಿಂದೆ ಗರುಡ ನಾಗರುಗಳಿಗೆ ತಂತಮ್ಮ ತಾಯಂದಿರ ದೆಸೆಯಿಂದ ವೃತ ಸಂಬಂಧ ಯುದ್ಧವಾದ ದಿನವೂ ಇದೇ ಎಂದು ಬಲ್ಲವರು ಹೇಳುತ್ತಾರೆ.

ಇದಕ್ಕೆ ಹೆಂಗಸರ ಜೋಕಾಲಿ ಹಬ್ಬ ಎಂಬ ಹೆಸರೂ ಬಳಕೆಯಲ್ಲಿದೆ. ಹಿಮಶಿಮ ಶೀತಲ ಚಳಿ ಗಾಳಿ ಮಳೆ, ಗುಡುಗುಟ್ಟಿಕೊಂಡು ಬರುವ ಗುಡುಗು ಸಿಡಿಲು ಮಿಂಚುಗಳ ಆವೇಶಕ್ಕೆ ಸಿಲುಕಿ ಮನೆಯೊಳಗೆ ಆಲಸ್ಯ ಬೇಸರಗಳಿಂದ ಜಡವಾದ ಮಾನವನ ಮನಸ್ಸಿಗೆ ಒಂದಿಷ್ಟು ಉಲ್ಲಾಸವೀಯಲೆಂದೇ ಕಂಕಣ ತೊಟ್ಟು ಓಡೋಡಿ ಬರುವ ಮೊದಲಹಬ್ಬ, ಮಳೆಕಾಲದ ಹಬ್ಬ.

"ನಿನ್ನ ಎಂತಹ ವೈರಿಯನ್ನಾದರೂ ಪ್ರೀತಿಸು" ಎಂಬುದೇ ನಾಗರಪಂಚಮಿಯ ಸಂಕೇತ. ಈ ಹಬ್ಬದಂದು ಪೂಜಿಸಿಕೊಳ್ಳಲ್ಪಡುತ್ತದೆ ಶೇಷ, ವಾಸುಕಿ, ತಕ್ಷಕ, ಪಿಂಗಳ, ಕರ್ಕೋಟಕವೇ ಮೊದಲಾದ ಸರ್ಪ ಸಂಕುಲ. ಒಲಿದದ್ದೇ ಆದರೆ ಈ ಕಲಿಯುಗದಲ್ಲಿ ಮಾನವ ಕುಟುಂಬಕ್ಕೆ ತಗಲಬಹುದಾದ ಭಯಂಕರ ರೋಗಾದ್ಯುಪದ್ರವಗಳೆಲ್ಲವನ್ನೂ ಪರಿಹರಿಸಿ ಸಂತಾನ ಪ್ರಾಪ್ತಿಯೊಂದಿಗೆ ಮಾನಸಿಕ ನೆಮ್ಮದಿಯನ್ನು ಕರುಣಿಸಿ ಬೇಡಿದ ಬಯಕೆಗಳೆಲ್ಲವನ್ನೂ ಬೇಗನೇ ಪೂರೈಸಿಕೊಡುವುದರಲ್ಲಿ ಸಹಕಾರಿ ದೇವಗಣ "ನಾಗ" ವೆಂಬುದು ಎಲ್ಲರಿಗೂ ಗೊತ್ತಿದ್ದ ವಿಷಯ.

ವಿಷದ ಹಾವು ನಮ್ಮನ್ನು ಕಡಿದರೆ ಸಾಯುತ್ತೇವೆ. ಗೊತ್ತಿದ್ದೂ ನಾವದಕ್ಕೆ ಹಾಲಿಟ್ಟು ಪೂಜಿಸುತ್ತೇವೆ. ಏನಿದರರ್ಥ? ವಿಷಜಂತು ಹಾವನ್ನು ಪ್ರಸನ್ನಗೊಳಿಸುವುದು. ತನ್ಮೂಲಕ ನಮಗೆ ಅನುಕೂಲಕರವಾಗಿ ಅದರ ಮನಸ್ಸನ್ನು ಪರಿವರ್ತಿಸಲೆತ್ನಿಸುವುದು.

ಅರ್ಥಾತ್ ಶತ್ರುವನ್ನು ಮಿತ್ರತ್ವದ ಸಲುಗೆಯಿಂದ ಗೆಲ್ಲುವುದು. ಇದುವೆ ನರ – ನಾಗರ ಸಂಬಂಧ–ನಾಗರ ಪಂಚಮಿಯ ಶುಭಸಂದೇಶ.

ಮಕ್ಕಳಾಗದಿದ್ದವರು ನಾಗರ ಕಲ್ಲನ್ನು ಹಾಕಿ ಪ್ರತಿಷ್ಠೆ ಮಾಡಿದುದೇ ಆದರೆ ಖಂಡಿತ ಮಕ್ಕಳಾಗುವುದೆಂಬ ವಿಶ್ವಾಸ ಈ ವಿಜ್ಞಾನ ಯುಗದಲ್ಲೂ ಇನ್ನೂ ಜೀವಂತವಿದೆ. (ನಾಗರ ಪ್ರತಿಷ್ಠೆ ಮಾಡುವ ಕ್ಷೇತ್ರವೆಂದೇ ಕೋಲಾರ ಜಿಲ್ಲೆಯ ವಿದುರಾಶ್ವತ್ಥ ಪ್ರಸಿದ್ಧವಾಗಿದೆ.)

ವಿಜ್ಞಾನಯುಗದ ಹೊಸಹೊಸ ಹೆಸರುಗಳು ಬೇಕಾದಷ್ಟಿದ್ದರೂ ಇಂದಿಗೂ ನಾವು ನಾಗೇಶ, ನಾಗರಾಜ, ನಾಗಾನಂದ, ನಾಗವೇಣಿ, ನಾಗರತ್ನ ಎಂಬ ಹೆಸರಿಟ್ಟು ನಾವು ನಮ್ಮ ಮಕ್ಕಳನ್ನು ಕರೆಯುವುದನ್ನು ನೋಡುವಾಗ ಸರ್ಪಕುಲದ ಮೇಲಣ ನಮ್ಮ ಅಭಿಮಾನ ಕುಂದಿಲ್ಲವೆಂಬುದನ್ನು ಸ್ಪಷ್ಟಪಡಿಸುತ್ತದೆ.

ಮುಂದೆ ಸದ್ಧರ್ಮ ಕಾರ್ಯಾಚರಣೆಗಳಿಗೆ ತೊಂದರೆಯುಂಟಾದಾಗ ಬೇಕಾದೀತೆಂಬ ಮುಂದಾಲೋಚನೆಯಿಂದ ನಮ್ಮ ಪೂರ್ವಿಕರು ಅವಶ್ಯಕ್ಕಿಂತ ಹೆಚ್ಚಿನ ಸಂಪತ್ತನ್ನು ಹೂಳಿಡುವ ಪದ್ಧತಿ ಇತ್ತೆಂಬುದನ್ನೂ ನಾವು ಕೇಳಿದ್ದೇವೆ–ಹೀಗೆ ಹೂತಿಟ್ಟ ತಮ್ಮ ಅಪೂರ್ವ ಸಂಪತ್ತು ಕಳ್ಳಕಾಕರ ಇನ್ನಿತರ ಯಾವುದೇ ವರ್ಗದ ಜನರಿಂದ ಕೊಳ್ಳೆಹೋದೀತೆಂಬ ಸಂಶಯದಿಂದ ಹೂತಿಟ್ಟ ಹಣದಮೇಲೆ ನಾಗನಹೆಡೆ ಬಿಡಿಸಿ ಮಂತ್ರ ತಂತ್ರ ವಿಧಾನದಿಂದ ಪ್ರತಿಷ್ಠಾಪಿಸಿ ತನ್ನ ಕಾಲಾನಂತರ ಸಂತತಿಯ "ಇಂತಿಷ್ಟನೇ"ಯವನಿಗೆ ಈಹಣ ಸಿಗಲಿ ಎಂದು ಪ್ರಾರ್ಥಿಸಿ ನಿಧಿಪೂಜೆ ನಡೆಸುತ್ತಿದ್ದರಂತೆ. ನಮ್ಮ ಹಿಂದೂ ಸಂಸ್ಕೃತಿಯ ಹಬ್ಬಹರಿದಿನಗಳೆಲ್ಲವೂ ಅಚಲವಾದೊಂದು ನಂಬಿಕೆ, ಶ್ರದ್ಧೆ, ವಿಶ್ವಾಸ, ಹಾಗೂ ಭಯ ಭಕ್ತಿಗಳೆಲ್ಲದರ ಕುರುಹಾಗಿಯೇ ಬಳಕೆಗೆ ಬಂದಿವೆ.

ಪೂರ್ವಜರು ಅನುಸರಿಸಿಕೊಂಡುಬಂದ, ಹೇಳಿಕೊಂಡುಬಂದ ಮಾತು, ನಡೆ, ಸಂಸ್ಕೃತಿ, ಸತ್ಕೃತಿಗಳ ಸಾಂಕೇತಿಕ ಆಚರಣೆಗಳೇ ಹಬ್ಬವಾಗಿ ನಮಗಿಂದು ಪರಿಣಮಿಸಿದೆ. ಈ ನಾಗಪಂಚಮಿಯ ಪರ್ವದಿನದಂದು ಪೂಜಿಸಿಕೊಳ್ಳಲ್ಪಡುವ ನಾಗಳು ಪುರಾಣರೀತ್ಯಾ ಕಶ್ಯಪರ ಮಡದಿ ಕದ್ರುವಿನಿಂದ ಜನಿಸಿದ ವಿಶಿಷ್ಟ ಜೀವಿಗಳು. ತನ್ನಿಷ್ಟಾರ್ಥ ಪೂರೈಸಿಕೊಳ್ಳಲಿಕ್ಕಾಗಿ ಮಾನವ ಈ ವಿಶಿಷ್ಟ ಜೀವಿ ನಾಗಗಳನ್ನು ಆರಾಧಿಸುವುದು ಅಂದಿಂದಿನ ಮಾತಲ್ಲ ಬಹಳ ಹಿಂದಿನಿಂದಲೂ ಬೆಳೆದು ಬಂದಿದೆ – ಉಷಃಕಾಲದಲ್ಲಿದ್ದ ಮಾನವ ಸ್ನಾನಮಾಡಿ ಮಡಿಯುಟ್ಟು ತನ್ನ ಮನೆತನದ ನಾಗಾಲಯವನ್ನೋ, ಸಮೀಪದ ನಾಗವನವನ್ನೋ ಪ್ರವೇಶಿಸಿ "ತನಿ" ಎರೆದು ಬರುತ್ತಾನೆ.

ನಾಗತನಿ ಎಂದರೆ ನಾಗನಕಲ್ಲಿಗೆ ಯಾ ಹುತ್ತಕ್ಕೆ ಮಂತ್ರಪೂರ್ವಕವಾಗಿ ಸಾಮಾನ್ಯ ಜನತೆ ಆಚಾರ್ಯ ಮುಖೇನ ಯಾ ಸ್ವತಃ ಮಾಡುವ ಪಂಚಾಮೃತ ಮಹಾಭಿಷೇಕ. ತನಿ ಎಂದರೆ ಮೀಸಲು ಎಂದರ್ಥ. ತನಿಯೆರೆಯುವುದು ಹಾಲು ಹಾಕುವುದು ಎಂದೂ ಹೇಳಬಹುದು. ಹಾಲು, ನೀರು, ಸೀಯಾಳಗಳೊಂದಿಗೆ ಅರಳು, ಬೆಲ್ಲ, ತಂಬಿಟ್ಟಿನ ನೈವೇದ್ಯ–ಕೇದಿಗೆಯ ಹೂವಿಗೆ ಅತಿ ಮಹತ್ವ. ಹಸಿ ಅಕ್ಕಿ ಹಿಟ್ಟಿನಿಂದ ತಯಾರಿಸಿದ ತಂಬಿಟ್ಟು, ಮೋದಕಗಳಿಗೆ ಅತಿಹೆಚ್ಚಿನ ಬೆಲೆ.

ಲಲನೆಯರಾದರೋ ಶುಭ್ರಸ್ನಾತರಾಗಿ, ಪಂಚಮೀವ್ರತ ಹಿಡಿದು ಹುತ್ತಕ್ಕೆ ಭಯ ಭಕ್ತಿಗಳ ಸೇವೆಸಲ್ಲಿಸುತ್ತಾರೆ. ಕೇದಿಗೆಯ ಹಾರವನ್ನರ್ಪಿಸುತ್ತಾರೆ.ಹಸುವಿನ ಹಾಲೆರೆದು,ಅರಸಿನ ಕುಂಕುಮ ಹಚ್ಚಿ "ತಂಪುಕಾಳಿ–ತಂಪುಕೊಡೆಂದು" ದೈನ್ಯತೆಯಲ್ಲಿ ಬೇಡುತ್ತಾರೆ.

ಇಷ್ಟಾರ್ಥ ಸಾಧನೆಯಲ್ಲಿ ನಾಗನನ್ನೊಲಿಸಿಕೊಳ್ಳುವರೆ ನಾಗಪಂಚಮಿ ವ್ರತ ಬಿಟ್ಟರೆ ಮತ್ತೊಂದು ಉತ್ತಮ ಕಲ್ಪದ ಮಾರ್ಗವೆಂದರೆ "ನಾಗಮಂಡಲ".

ಚಕ್ರಾಕಾರದಲ್ಲಿ ಬಣ್ಣಬಣ್ಣದ ಹುಡಿಗಳಿಂದ ಚಿತ್ರ ವಿಚಿತ್ರತೆಯಿಂದೊಡಗೂಡಿದ ಮಂಡಲ ಬರೆದು ಅದರ ಸುತ್ತಲೂ ನಾಲ್ಕುಮೂಲೆಗಳಲ್ಲಿ ಸರ್ಪವನ್ನು ರಚಿಸಿ, ನಡುಮಧ್ಯದಲ್ಲೆಂಬಂತೆ ಗಿ.ಸೆಡೆಯ ಆದಿಶೇಷನ ಚಿತ್ರ ಬಿಡಿಸಿ ಮಂತ್ರತಂತ್ರ ವಿಧಾನಗಳಿದ ಷೋಡಷೋಪಚಾರ ಪೂಜೆ, ದಾನ ಧರ್ಮಾದಿಗಳಿಂದ, ಅನ್ನ ಸಂತರ್ಪಣೆ ನಡೆಸಿ, ಮಂಡಲಕ್ಕೆ ಸುತ್ತಾಗಿ ನಾಗದರ್ಶನ, ನಾಗನೃತ್ಯ ಡೆಕ್ಕೆಬಲಿಯೊಂದಿಗೆ ಸಪರಿವಾರ ಮಹಾಶೇಷನನ್ನು ಹಾಡಿಹೊಗಳುವ, ಬೈದು ಹಂಗಿಸುವ ವಿಶಿಷ್ಟತೆಯ ನಿರ್ಮಲ ಪವಿತ್ರ ಸೇವೆ. ಈ ನಾಗ ಮಂಡಲ ದರ್ಶನದಲ್ಲಿ ಭಾಗವಹಿಸುವವರನ್ನು "ನಾಗಪಾತ್ರಿ" ಎಂತಲೂ, ನಾಗಕನ್ನಿಕೆಯ ವೇಷ ತೊಟ್ಟು ಡೆಕ್ಕೆ ಹಿಡಿದು ನಾಗಪಾತ್ರಿಗೆದುರಾಗಿ ಹಾಡುತ್ತಾ ಕುಣಿವವರಿಗೆ "ನಾಗವೈದ್ಯ" ರೆಂತಲೂ ಕರೆಯುತ್ತಾರೆ. ನೋಡಲು ಮನಮೋಹಕವಾಗಿ ಕಂಡು, ಭಯ ಭಕ್ತಿ ಹುಟ್ಟಿಸುವ ಈ ನಾಗಮಂಡಲ ಸೇವೆಯು ಅಪಾರ ಖರ್ಚಿನ ದೆಸೆಯಿಂದಾಗಿ ಅಪರೂಪವಾಗಿದ್ದರೂ ಆಗೊಮ್ಮೆ ಈಗೊಮ್ಮೆ ಜೀರ್ಣೋದ್ಧಾರದ ನೆವದಲ್ಲಿ ಸೇವಾ ಹರಕೆ ರೂಪದಲ್ಲಿ ನಾಗಾಲಯ, ದೇವಸ್ಥಾನ, ಮಠ ಸಂಸ್ಥಾನಗಳಲ್ಲಿ ಕಾಣಸಿಗುತ್ತದೆ.

ಆದಲ್ಲದೆ ನಾಗೋಪಾಸಕರು ತಮ್ಮ ಮಂತ್ರ ಸಿದ್ಧಿಗಾಗಿ ವರುಷಕ್ಕೊಮ್ಮೆಯಾದರೂ ಸೂಕ್ಷ್ಮ ತರದಲ್ಲಿ ನಾಗಮಂಡಲದ ಸೇವೆಯನ್ನು ಮಾಡುವುದೂ ಉಂಟು.

(12 ನೇ ಪುಟ ನೋಡಿ)

# ನಾಗಪೂಜೆಯ ಇತಿಹಾಸ

ಹಿಂದೆ ದಕ್ಷಿಣ ಭಾರತದಲ್ಲಿ ನೆಲೆಸಿದಂತಹ ದ್ರಾವಿಡರು ನಾಗೋಪಾಸಕರೆಂದು ನಾವು ಚರಿತ್ರೆಯಿಂದ ಕಂಡುಕೊಳ್ಳುತ್ತೇವೆ. ದ್ರಾವಿಡರು ನಾಗನನ್ನು ತಮ್ಮ ಅಗ್ರದೇವನೆಂದು ಸ್ವೀಕರಿಸಿದ್ದರಂತೆ. ಆರ್ಯರು ಭಾರತಕ್ಕೆ ಬರುವ ಮೊದಲೇ ದ್ರಾವಿಡರಲ್ಲಿ ಈ ಪೂಜೆಯ ಸಂಪ್ರದಾಯವಿತ್ತೆಂದು ನಮಗೆ ತಿಳಿದು ಬರುತ್ತದೆ. ಭಾರತದ ತುಂಬ ನಾಗಪೂಜೆಯ ಸಂಪ್ರದಾಯ ಯಥಾವತ್ತಾಗಿ ನಡೆಯುತ್ತಿತ್ತೆಂದು ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ. ಜೀವಂತ ನಾಗನನ್ನು ಹಿಡಿದು ತಂದು ಅಥವಾ ಕಗ್ಗಲ್ಲಿನಲ್ಲಿ ಕೆತ್ತಿದ ನಾಗ ಮೂರ್ತಿಯನ್ನು ದ್ರಾವಿಡರು ಪೂಜಿಸುತ್ತಿದ್ದರಂತೆ. ಪೂರ್ವಜರು ದಕ್ಷಿಣಭಾರತದಲ್ಲಿ ನಾಗದೇವತೆಯನ್ನೇ ಗ್ರಾಮದೇವತೆಯೆಂದು ನಂಬಿದ್ದರು. ಬೆಳೆಗಳನ್ನು ಬೆಳೆಸುವಾಗ ಕೊಯ್ಯುವಾಗ, ಊರಿನಲ್ಲಿ ಸಾಂಕ್ರಾಮಿಕ ರೋಗ ಹಬ್ಬಿದಂತೆ ಪ್ರಾಂತ್ಯದ ಜನರೆಲ್ಲರೂ ಒಟ್ಟಾಗಿ ನಾಗದೇವನನ್ನು ಪೂಜಿಸಿ ತಮ್ಮ ತಮ್ಮ ಕಷ್ಟ ಸಂಕಷ್ಟಗಳನ್ನು ನಿವಾರಿಸಿ ಕೊಳುತ್ತಿದ್ದರಂತೆ. ಈ ರೀತಿಯಲ್ಲಿ ದ್ರಾವಿಡರು ಕ್ರಿಸ್ತಪೂರ್ವಕ್ಕೆ ಮೊದಲೂ ನಾಗದೇವತೆಯನ್ನು ಪೂಜಿಸಿಕೊಂಡು ಬರುತ್ತಿದ್ದರೆಂದು ಹೇಳಬಹುದು. ಸಿಂಧೂ, ಹರಪ್ಪ ಸಂಸ್ಕೃತಿಯಲ್ಲೂ ನಾಗಪೂಜೆಯ ಉಲ್ಲೇಖಗಳಿವೆ. ನಾಗನು ದುಷ್ಟರನ್ನು ಸಂಹರಿಸಿ ಶಿಷ್ಟರನ್ನು ರಕ್ಷಿಸುತ್ತಾನೆಂದು ಅಂದಿನ ಕಾಲದ ಜನರು ನಂಬಿದ್ದರು.

ಗುಪ್ತರ ಹಾಗೂ ಶಾತವಾಹನರ ಕಾಲದಲ್ಲೂ ನಾಗಪೂಜೆ ರೂಢಿಯಲ್ಲಿತ್ತೆಂದು ತಿಳಿಯ ಬಹುದು. ಅಂದಿನ ಕಾಲದಲ್ಲಿ ರಾಜರಿಗೆ ನಾಗ, ನಾಗಸೇನ, ನಾಗವರ್ಮ, ನಾಗದತ್ತ, ಮುಂತಾದ ನಾಗದೇವತೆಗೆ ಸಂಬಂಧಿಸಿದಂತೆ ಹೆಸರುಗಳನ್ನಿಡುವ ವಾಡಿಕೆ ಇತ್ತಂತೆ. ಇದರಿಂದ ಹೋರಾಟಕಾಲದಲ್ಲಿ ನಾಗದೇವನು ಶಕ್ತಿಯನ್ನು ಕೊಡುತ್ತಾನೆಂದು ಅವರು ನಂಬಿದ್ದರು. ಎರಡನೇ ಚಂದ್ರಗುಪ್ತನು ನಾಗವಂಶದ "ಕುಬೇರನಾಗ"ಎಂಬುವಳನ್ನು ಮದುವೆಯಾದ ಕಾರಣ ಪರಕೀಯರನ್ನು ಸುಲಭದಲ್ಲಿ ಜಯಿಸಲು ಸಾಧ್ಯವಾಯಿತಂತೆ. ಹಿಂದಿನ ರಾಜರ ಕಲೆಗಳಲ್ಲಿ ನಮಗೆ ನಾಗದೇವನ ಮೂರ್ತಿಗಳು ನೋಡಲು ಸಿಗುತ್ತವೆ. ಇದರಿಂದ ಪ್ರಾಚೀನ ಕಾಲದಲ್ಲಿ ನಾಗಪೂಜೆಯು ಅತ್ಯಂತ ಜನಪ್ರಿಯವಾಗಿತ್ತೆಂದು ತಿಳಿಯುತ್ತದೆ.

ನಾಗಪೂಜೆಯು ಭಾರತೀಯ ಸಂಸ್ಕೃತಿಯಲ್ಲಿ ಮಾತ್ರವಲ್ಲ, ವಿಶ್ವದ ಅನೇಕ ಪ್ರಾಚೀನ ಸಂಸ್ಕೃತಿಗಳಲ್ಲೂ ಕಂಡು ಬರುತ್ತದೆ. ಭಾರತೀಯರು ದೇವರನ್ನು ಸಕಲ ಜೀವಿಗಳ ಕಾರಣ ಕರ್ತನೆಂದು ಹಿಂದಿನಿಂದಲೂ ತಿಳಿದಿರುವರು. ಈ ರೀತಿಯಲ್ಲಿ ಕೆಲವು ಪ್ರಾಣಿಗಳನ್ನೂ, ವೃಕ್ಷಗಳನ್ನೂ ಪ್ರಕೃತಿಗನುಸಾರವಾಗಿ ದಿವ್ಯಶಕ್ತಿಯ ಸಂಕೇತವೆಂದು ಭಾರತೀಯ ಸಂಸ್ಕೃತಿಯು ಒಪ್ಪಿಕೊಂಡಿದೆ. ವಿದೇಶಗಳಲ್ಲೂ ಕೆಲವು ಪ್ರಾಣಿಗಳನ್ನು ಪವಿತ್ರತೆಯ ಸಂಕೇತವಾಗಿ ಪೂಜಿಸುತ್ತಾರೆ. ಈಜಿಪ್ಟಿನಲ್ಲಿ ನಾಗವು ಅಮೃತತ್ವದ ಸಂಕೇತವಾಗಿದೆ. ಈಜಿಪ್ಟಿನ ಪ್ರಾಚೀನ ದೇವಾಲಯಗಳ ಮುಖಮಂಟಪಗಳಲ್ಲಿ ಎರಡು ತಲೆಯ ನಾಗನ ಶಿಲ್ಪಕಲೆಯನ್ನು ನಾವು ಕಾಣಬಹುದು. ನಾಗಗಳು ಪಾತಾಳ ಮತ್ತು ಭೂಮಿಯ ಜೋಡಣೆಯೆಂದು ಪ್ರಾಚೀನ ಗ್ರೀಕರ ನಂಬಿಕೆಯಾಗಿದೆ. ಗ್ರೀಕ್ ವೀರರ ಚಿತ್ರದೊಂದಿಗೆ ಕೆತ್ತಿದ ನಾಗ ಚಿತ್ರವಿರುವುದು ಬಹಳ ಶಿಷ್ಟವಾಗಿದೆ. ಪ್ರಾಚೀನ ಬಾಬಿಲೋನ್, ಬರ್ಮಾಗಳಲ್ಲಿ ನಾಗದೇವತೆಗೆ ಪ್ರತ್ಯೇಕ ಗುಡಿಗಳನ್ನು ಕಟ್ಟಿ ಆರಾಧಿಸುತ್ತಿದ್ದರು. ಜಾವಾ, ಹಾಗೂ, ಬೋರ್ನಿಯೋ ದ್ವೀಪಗಳಲ್ಲಿ ನಾಗಾರಾಧನೆಯು ಕೂಡಾ ವಿಶೇಷ ಪ್ರಚಾರದಲ್ಲಿದೆ. ಕ್ಷತ್ರಿಯ ಸತ್ತಲ್ಲಿ ಆತನ ಶವದೊಂದಿಗೆ ಸತ್ತ ಹಾವನ್ನು ಸುಡುವುದು ಆ ದ್ವೀಪಗಳಲ್ಲಿನ ಶವ ಸಂಸ್ಕಾರದ ಪುರಾತನ ಪದ್ಧತಿಯಾಗಿದೆ. ನಾಗವು ವಿಶ್ವವನ್ನಾಳುವ ಮಹಾನ್ ದೇವತೆಯೆಂದು ನಂಬಿದ್ದ ಪರ್ಶಿಯನ್ನರು ನಾಗನಿಗಾಗಿ ಪ್ರತ್ಯೇಕ ದೇವಾಲಯಗಳನ್ನು ಕಟ್ಟಿ ಸಂಭ್ರಮದಿಂದ ಉತ್ಸವ ಜಾತ್ರೆಗಳನ್ನು ಜರುಗಿಸುತ್ತಿದ್ದರು. ನಾಗವು ಮಳೆತರುವ ದೇವತೆಯೆಂದೂ, ಪ್ರಾಚೀನ ಚೀನಿಯರ ಮೂಲಪುರುಷದೇವತೆಯೆಂದೂ, ಚೀನಿಯರು ನಂಬಿದ್ದರು. ಜಪಾನ್, ಮತ್ತು ಚೀನದಲ್ಲೂ ಬಹಳ ಹಿಂದಿನಿಂದಲೂ ಸರ್ಪ ಪೂಜಾಪದ್ಧತಿ ಇತ್ತೆಂದು ತಿಳಿಯುತ್ತದೆ.

ನಾಗರ ಪಂಚಮಿಯ ಕುರಿತು ಪುರಾಣಗಳಲ್ಲೂ ಅನೇಕ ಕತೆಗಳು ಇವೆ. ಜನಮೇಜಯ ಮಹಾರಾಜನು ಮಾಡುತ್ತಿದ್ದ ಸರ್ಪಯಜ್ಞವು ಅರ್ಧದಲ್ಲೇ ನಿಲ್ಲಲ್ಪಟ್ಟಾಗ ಅದರಿಂದ ಜನಮೇಜಯನಿಗೆ ಮಹಾವ್ಯಾಧಿಯು ಬರಲು ವ್ಯಾಸಮಹರ್ಷಿಯ ಸೂಚನೆಯಂತೆ ಮಹಾಭಾರತ ಕತೆಯನ್ನು ಕೇಳಿದನು. ಇದು ಶ್ರಾವಣಶುದ್ಧ ಪಂಚಮಿಯ ದಿನವೇ ಆಗಿದೆ.

ಒಮ್ಮೆ ಕಶ್ಯಪನ ಪತ್ನಿಯರಾದ ಕದ್ರುವಿಗೂ, ವಿನತೆಗೂ ಮಾತಿನ ಚಕಮಕಿಯಾಯಿತು. ಅಕ್ಕ ತಂಗಿಯರಲ್ಲಿ ವಾದ ಉಂಟಾಯಿತು. ವಿನತೆಯನ್ನು ಗೆದ್ದು ದಾಸಿಯನ್ನಾಗಿ ಮಾಡಿಕೊಳ್ಳಬೇಕೆಂದು ಕದ್ರುವು ವಿನತೆಯೊಡನೆ ಉಚ್ಚೈಶ್ರವಸ್ಸು ಎಂಬ ದೇವಲೋಕದ ಕುದುರೆಯ ಬೆನ್ನ ಮೇಲೆ ಕಪ್ಪು ರೇಖೆಯುಂಟೆಂದು ಸುಳ್ಳುವಾದವನ್ನು ಹೂಡಿದಳು. ವಿನತೆಯು ಬಿಳಿ ರೇಖೆ ಇದೆಯೆಂದು ವಾದಿಸಿದಳು. ಇಬ್ಬರೂ ಪಂಥಾಹ್ವಾನ ಮಾಡಿಕೊಂಡು 'ಸೋತವಳು ಗೆದ್ದವಳ ದಾಸಿಯಾಗಿರಲು' ಒಪ್ಪಿಕೊಂಡರು. ಕದ್ರುವು ತನ್ನ ಮಗ ಕಾರ್ಕೋಟಕನ ಸಹಾಯದಿಂದ ಪಂಥದಲ್ಲಿ ವಿನತೆಯನ್ನು ಸೋಲಿಸಿದಳು. ವಿನತೆಯು ಕದ್ರುವಿನ ದಾಸಿಯಾದಳು. ಮುಂದೆ ವಿನತೆಯ ಮಗನಾದ ಗರುಡನು ಕದ್ರು ಮತ್ತು ಅವಳ ಮಕ್ಕಳ ಸೇವೆ ಮಾಡಬೇಕಾಗಿ ಬಂದ ಕಾರಣ ಬೇಸರಪಟ್ಟು ಕದ್ರುವಿನೊಡನೆ ದಾಸ್ಯ ಸಂಕೋಲೆಯಿಂದ ವಿಮೋಚನೆಯಾಗುವ ಬಗೆಯನ್ನು

**ಶ್ರೀ ಗಣಪತಿಭಟ್ ಆರ್ತಿಕಜೆ**

(12 ನೇ ಪುಟ ನೋಡಿ)

ಯುವವಾಣಿ

# ಸಂತೋಷೋ ನಂದನವನಂ ಶಾಂತಿರೇವ ಹಿ ಕಾಮಧುಕ್

ಶ್ರೀಮದ್ರಾಮಾಯಣ ಶತಕೋಟಿ ಗ್ರಂಥಾತ್ಮಕ. ಇದರಲ್ಲಿನ ಒಂದೊಂದು ಅಕ್ಷರವೂ ಪುಣ್ಯಪ್ರದ; ಪ್ರತಿಯೊಂದು ಸನ್ನಿವೇಶವೂ ಬೋಧಪ್ರದ ಭಗವಾನ್, ಮುನಿ, ಮಹರ್ಷಿ, ತಪಸ್ವಿ, ಇತ್ಯಾದಿ ವಿಶೇಷಣ ವಿಶಿಷ್ಟರಾದ ವಾಲ್ಮೀಕಿಗಳಿಂದ ರಚಿತವಾದ "ರಾಮಾಯಣ"ವೇ ಅತ್ಯಂತ ಪ್ರಸಿದ್ಧವಾಗಿದ್ದರೂ, ಇದರಂತೆಯೇ ಧರ್ಮವಿಗ್ರಹಿಯಾದ ಶ್ರೀರಾಮನ ಕಥೆಯನ್ನು ಬೇರೆಬೇರೆಯಾಗಿ ವಿವರಿಸುವ ರಾಮಾಯಣ ಗ್ರಂಥಗಳು ಹಲವಾರು ಆನಂದರಾಮಾಯಣ, ವಾಶಿಷ್ಠ ರಾಮಾಯಣ ಇತ್ಯಾದಿಗಳು. ಈ ಪರಂಪರೆಯಲ್ಲಿ ಸೇರುವ ಇನ್ನೊಂದು ರಾಮಾಯಣ ಗ್ರಂಥ "ಅಧ್ಯಾತ್ಮರಾಮಾಯಣ".

ಗಿರಿಕುಮಾರಿಯಾದ ಗೌರಿಯು, ತನ್ನ ಕಾಂತನೂ ಶ್ರೀರಾಮ ಭಕ್ತನೂ ಆದ ಗಿರೀಶನನ್ನು ಕುರಿತು "ಪೃಚ್ಛಾಮಿ ಚಾನ್ಯಚ್ಚ ಪರಂ ರಹಸ್ಯಂ" ಎಂದು ಹಿಮ್ಮೆ ಶ್ರೀರಾಮ ತತ್ತ್ವವನ್ನು ವಿಸ್ತೃತವಾಗಿ ತಿಳಿಯಲು ಆಶಿಸುತ್ತಾಳೆ. ಸತಿಯ ಪ್ರಶ್ನೆಗೆ ಓಗೊಟ್ಟ ಶಿವ "ಧನ್ಯಾಸಿ ಭಕ್ತಾಸಿ ಪರಾತ್ಮನಸ್ತ್ವಂ ಯದ್‌ಜ್ಞಾತು ಮಿಚ್ಛಸಿ ತವ ರಾಮತತ್ತ್ವಂ" ಎಂದು ಆಕೆಯನ್ನು ಪ್ರಶಂಸಿಸಿ, ಶ್ರೀರಾಮಚಂದ್ರನ ಅಧ್ಯಾತ್ಮ ತತ್ತ್ವವನ್ನು ಕಥಾರೂಪವಾಗಿ ಸುಲಲಿತವಾಗಿ ಬೋಧಿಸುತ್ತಾನೆ. ಈ ರೀತಿ ಶಿವನು ಶಿವೆಗೆ ಬೋಧಿಸಿದ ರಾಮಾಯಣವೇ "ಅಧ್ಯಾತ್ಮರಾಮಾಯಣ".

ಈ ಅಧ್ಯಾತ್ಮರಾಮಾಯಣದ ಅಯೋಧ್ಯಾಕಾಂಡದ ನಾಲ್ಕನೆಯ ಸರ್ಗದಲ್ಲಿನ ಒಂದು ಪ್ರಕರಣ ಸಂಸಾರಬಂಧನದಲ್ಲಿ ಕಾಮಕ್ರೋಧಾದಿ ಅರಿಷಡ್ವರ್ಗಗಳ ಆಕ್ರಮಣಕ್ಕೆ ಸಿಲುಕಿ ನರಳುತ್ತಿರುವ ಮಾನವ ಪ್ರಾಣಿಗೆ ಅವುಗಳಿಂದ ಬಿಡುಗಡೆಯಾಗುವ ಸುಲಭವಾದ ಉಪಾಯವನ್ನು ಬೋಧಿಸುತ್ತದೆ.

ಮಂಥರಾ ದಾಸಿಯಿಂದ ಪ್ರೇರಿತಳಾದ ಕೈಕೇಯಿ, ತನ್ನ ಪತಿಯಾದ ದಶರಥನಿಂದ ಹಿಂದೆ ತನಗೆ ಲಭಿಸಿದ ವರಗಳ ಫಲವಾಗಿ ಶ್ರೀರಾಮನನ್ನು ಕಾಡಿಗೆ ಕಳುಹಿಸುವ ಯತ್ನ ಮಾಡಿದ್ದಾಳೆ. ದಶರಥ ದುಃಖಾತಿಶಯದಿಂದ ಸುಮಂತ್ರನ ಮೂಲಕ ಶ್ರೀರಾಮನನ್ನು ಕರೆಯಿಸಿಕೊಂಡಿದ್ದಾನೆ. ವಿಷಯವನ್ನು ತಿಳಿದ ಶ್ರೀರಾಮನು ತಂದೆಯನ್ನು ಬಹುವಾಗಿ ಸಮಾಧಾನಗೊಳಿಸಿ, ತಾಯಿಯಾದ ಕೌಸಲ್ಯಾದೇವಿಯ ಆಶೀರ್ವಾದವನ್ನು ಪಡೆಯಲು ಆಕೆಯ ಅಂತಃಪುರದತ್ತ ಹೊರಟಿದ್ದಾನೆ.

ಸುಮಿತ್ರೆಯಿಂದ ಶ್ರೀರಾಮಾಗಮನದ ವಾರ್ತೆಯನ್ನು ತಿಳಿದ ಆಕೆಯು ಸಂಭ್ರಮದಿಂದ ಆತನನ್ನು ಎದುರುಗೊಂಡು ಉಪಚರಿಸಲು ತೊಡಗುತ್ತಾಳೆ. "ದಂಡಕಾಗಮನೇ ಶೀಘ್ರಂ ಮಮ ಕಾಲೋಽದ್ಯ ನಿಶ್ಚಿತ, ಭರತಾಯ ದದೌ ರಾಜ್ಯಂ ಮಮಾಪ್ಯರಣ್ಯಮುತ್ತಮಂ" ಎಂದು, ತನ್ನ ಅರಣ್ಯಗಮನದ ಸಂಗತಿಯನ್ನೂ, ಭರತನ ಪಟ್ಟಾಭಿಷೇಕ ವಾರ್ತೆಯನ್ನು ಆಕೆಗೆ ತಿಳಿಸುತ್ತಾನೆ. "ಭರತನಿಗೆ ರಾಜ್ಯವನ್ನು ಕೊಡಲಿ, ಇದಕ್ಕೆ ಅಡ್ಡಿ ಬರುವವರು ಯಾರು? ನಿರಪರಾಧಿಯಾದ ನಿನ್ನನ್ನು ಕಾಡಿಗೆ ನಿಷ್ಕಾರಣವಾಗಿ ಕಳುಹಿಸುವುದಾದರೂ ಏತಕ್ಕಾಗಿ?" ಎಂದು ಉಮ್ಮಳಿಸುತ್ತ "ತದಾ ಪ್ರಾಣಾನ್ ಪರಿತ್ಯಜ್ಯ ಗಚ್ಛಾಮಿ ಯಮಸಾದನಂ" ಎಂದು ತಾನು ಪ್ರಾಣ, ಬಿಡುವ ಸಂಕಲ್ಪವನ್ನು ಕೌಸಲ್ಯೆ ಶ್ರೀರಾಮನಿಗೆ ತಿಳಿಸುತ್ತಾಳೆ.

ಕೌಸಲ್ಯಾಮಾತೆಯ ಅತಿಶಯವಾದ ದುಃಖ, ಪ್ರೀತಿಯ ಅಣ್ಣನ ಪಾಲಿಗೆ ಬಂದ ಅನಿರೀಕ್ಷಿತವಾದ ವನವಾಸ, ಇವುಗಳಿಂದ ರಾಮಾನುಜನಾದ ಲಕ್ಷ್ಮಣನು ಕೆರಳಿ ನಿಲ್ಲುತ್ತಾನೆ. ಮೂರುಲೋಕವನ್ನೆ ಸುಡುವಂತಹ ಕೋಪ ಉಕ್ಕೇರಿ ಬರುತ್ತದೆ.

ವಿದ್ವಾನ್ ಬಿ. ಬಾಲಗಣಪತಿ ಭಟ್ಟ

ಉನ್ಮತ್ತಂ ಭ್ರಾಂತಮನಸಂ
ಕೈಕೇಯೀವಶವರ್ತಿನಂ ।
ಬದ್ಧ್ವಾ ನಿಹನ್ಮಿ ಭರತಂ
ತದ್ಬಂಧೂನ್ ಮಾತುಲಾನಪಿ
ಅದ್ಯ ಪಶ್ಯಂತು ಮೇ ಶೌರ್ಯಂ
ಲೋಕಾನ್ ಪ್ರದಹತಃ ಪುರಾ।........
ಧನುಷ್ಪಾಣಿರಹಂ ತತ್ರ
ನಿಹನ್ಯಾಂ ವಿಘ್ನಕಾರಿಣಃ ॥.........

ವನವಾಸಕ್ಕೆ ಕಾರಣರಾದವರೆಲ್ಲರನ್ನೂ ಕೊಲ್ಲುತ್ತೇನೆ, ನೀನು ಪಟ್ಟಾಭಿಷೇಕಕ್ಕೆ ಸಿದ್ಧನಾಗು, ಒಂದುವೇಳೆ ಈ ಪವಿತ್ರ ಕಾರ್ಯಕ್ಕೆ ಯಾರಾದರೂ ಆತಂಕವೊಡ್ಡಿದರೆ ಧನುರ್ಧಾರಿಯಾಗಿ ನಾನು ಎದುರಿಸುತ್ತೇನೆ—ಹೀಗೆ ಲಕ್ಷ್ಮಣನು ಗುಡುಗುತ್ತಿರುವುದನ್ನು ಕಂಡು, ಪ್ರಶಾಂತಾತ್ಮನಾದ ಶ್ರೀರಾಮಚಂದ್ರನು ಈ ಕಾಮಕ್ರೋಧಾದಿಗಳು ಸಾಂಸಾರಿಕ ಬಂಧನಕಾರಿಗಳು ಎಂದು ವಿವರಿಸುತ್ತ ಸಮಾಧಾನಗೊಳಿಸುತ್ತಾನೆ. ಈ ಪ್ರಕರಣದಲ್ಲಿ ಶ್ರೀರಾಮಚಂದ್ರನ ಬಾಯಿಯಿಂದ ಹೊರಟ ಸಾಂತ್ವನೋಕ್ತಿಗಳು ಮಾನವ ಸಾಮಾನ್ಯರಿಗೆ ಮಾಡಿದ ದಿವ್ಯೋಪದೇಶವಾಗಿದೆ.

"ಅಯ್ಯಾ ಲಕ್ಷ್ಮಣ! ಈ ರಾಜ್ಯಹಾಗೂ ಈ ದೇಹ ಇತ್ಯಾದಿಗಳು ನಿತ್ಯವಾಗಿದ್ದಲ್ಲಿ ನಿನ್ನ ಈ ಶ್ರಮ ಸಾರ್ಥಕವಾಗಿತ್ತು.

ಭೋಗ ಮೇಘವಿತಾನಸ್ಥ
ವಿದ್ಯುಲ್ಲೇಖೇವ ಚಂಚಲಾಃ
ಆಯುರಪ್ಯಗ್ನಿ ಸಂತಪ್ತ
ಲೋಹಸ್ಥ ಜಲಬಿಂದುವತ್
ಯಥಾವ್ಯಾಲಗಲ ಸ್ಥೋಽಪಿ
ಭೇಕೋದಂಶಾನಪೇಕ್ಷತೇ
ತಥಾ ಕಾಲಾಹಿನಾ ಗ್ರಸ್ತೋ
ಲೋಕೋಭೋಗಾನಶಾಶ್ವತಮ್

ಮೇಘಮಾಲೆಯ ಮಡಿಲ್ಲಲ್ಲಿ ಸುಳಿದ ಮಿಂಚಿನ ಕುಡಿಯಂತೆ ಈ ಪ್ರಪಂಚದ ಭೋಗಗಳೆಲ್ಲವೂ ಚಂಚಲಗಳು, ಕಾದಕಬ್ಬಿಣದ ಮೇಲೆ ಉರುಳಿದ ನೀರಿನ ಹನಿಯಂತೆ ಆಯುಸ್ಸು ತಾನಾಗಿಯೇ ಕರಗಿ ಹೋಗುವುದು. ಹಾವಿನ ದವಡೆಗೆ ಸಿಕ್ಕಿದ ಕಪ್ಪೆಯೊಂದು ತನ್ನ ಮುಂದೆ ಸುಳಿದ ನೊಣಕ್ಕೆ ಆಸೆಪಡುವಂತೆ ಕಾಲಗ್ರಸ್ತನಾದ ಮಾನವನಿಗೆ ಈ ಅಶಾಶ್ವತವಾದ ಭೋಗದ ಆಸೆ. ಅಂತೆಯೇ ಈ ಬಂಧು ಬಾಂಧವರ ವ್ಯಾಮೋಹವೂ ಉಚಿತವಲ್ಲ. 'ಪ್ರಪಾಯಾಮಿವ ಬಂಧೂನಾಂ ನದ್ಯಾಂ ಕಾಷ್ಠೌಘವಚ್ಚಲಃ' ಅರವಟ್ಟಿಗೆಯಲ್ಲಿ ಸೇರಿದ ಜಂಗುಳಿಯಂತೆ ನದಿಯ ಪ್ರವಾಹದಲ್ಲಿ ತೇಲುವಾಗ ಸಿಕ್ಕಿದ ಕಟ್ಟಿಗೆ ರಾಶಿಯಂತೆ ಮನುಷ್ಯನಿಗೆ ನೆಂಟರಿಷ್ಟರು.

ಈ ಜಗತ್ತಿನ ಸಂಪತ್ತಾಗಲೀ ತಾರುಣ್ಯಾದಿ ದೈಹಿಕ ಅವಸ್ಥೆಗಳಾಗಲೀ ಸ್ಥಿರವಲ್ಲ

ಸಂಸ್ಕೃತಿಃ ಸ್ವಪ್ನಸದೃಶೀ
ಸದಾರೋಗಾದಿ ಸಂಕುಲಾ ।
ಗಂಧರ್ವ ನಗರ ಪ್ರಖ್ಯಾ
ಮೂಢಸ್ತಮನುವರ್ತತೇ ॥

ರೋಗ ರುಜಿನಾದಿಗಳಿಂದ ಕೂಡಿದ ಸಂಸಾರ ಸ್ವಪ್ನ ಸದೃಶವಾದದ್ದು. ಮಾಯಾನಗರದಂತಿರುವ ಈ ಸಂಸಾರವನ್ನು ಹಿಂಬಾಲಿಸುವವರು ಮೂಢರು.

ಇದಕ್ಕೆಲ್ಲಾ ಮುಖ್ಯಕಾರಣ ದೇಹಾಭಿಮಾನ. "ದೇಹವನ್ನೇ ತಾನು ಎಂದು ಭಾವಿಸುವುದು ಅವಿದ್ಯೆ. ನಾನು ದೇಹವಲ್ಲ ಎಂದು ಭಾವಿಸುವ ನಿಶ್ಚಿತ ಬುದ್ಧಿಯೇ ವಿದ್ಯೆ. ದೇಹಾಭಿಮಾನದ 'ಅವಿದ್ಯೆ'ಯನ್ನು ದೂರ ಮಾಡಿ ನಾನು ಚಿದಾತ್ಮಾ ಎಂಬ ಅರಿವಿನ ವಿದ್ಯೆಯನ್ನು ಸಾಧಿಸಿ ಮೋಕ್ಷಕ್ಕೆ ಯತ್ನಿಸುವುದೇ ಪ್ರತಿಯೊಬ್ಬನ ಮುಖ್ಯಕರ್ತವ್ಯ.

ಕಾಮ ಕ್ರೋಧಾದಯಸ್ತತ್ರ
ಶತ್ರವಃ ಶತ್ರುಸೂದನ
ತತ್ರಾಪಿ ಕ್ರೋಧ ಏವಾಲಂ
ಮೋಕ್ಷವಿಘ್ನಾಯ ಸರ್ವದಾ
ಕ್ರೋಧ ಮೂಲೋ ಮನಸ್ತಾಪಃ
ಕ್ರೋಧಃ ಸಂಸಾರ ಬಂಧನಂ

ಕಾಮ ಕ್ರೋಧಾದಿಗಳೇ ಬದುಕಿನ ಪ್ರಬಲ ಶತ್ರುಗಳು ಅವುಗಳಲ್ಲಿ ಮೋಕ್ಷಕ್ಕೆ ವಿಘ್ನಕಾರಿಯಾದ ಕ್ರೋಧಕ್ಕೆ ಪ್ರಥಮ ಸ್ಥಾನ. ಧರ್ಮಕ್ಷಯಕಾರಿಯಾದ ಕೋಪವನ್ನು ಸರ್ವಥಾ ತ್ಯಾಗಮಾಡು – ಎಂದು ರಾಮನು ಲಕ್ಷ್ಮಣನಿಗೆ ಬೋಧಿಸಿದ್ದಲ್ಲದೆ "ಸಂತೋಷೋ ನಂದನವನಂ ಶಾಂತಿರೇವ ಹಿ ಕಾಮಧುಕ್"ಎಂದು ಸಂತೋಷ, ಶಾಂತಿಗಳನ್ನು ಪ್ರಶಂಸಿದನು. "ಎಲೈ ಲಕ್ಷ್ಮಣ! ನೀನು ಹೇಳಿದ ಈ ಶತ್ರು ನಿಗ್ರಹವನ್ನು ಮಾಡುತ್ತ, ನನ್ನ ಮಾತುಗಳನ್ನು ಮನನ ಮಾಡು" ಎಂದು ತನ್ನ ಉಪದೇಶವನ್ನು ಶ್ರೀರಾಮನು ಮುಕ್ತಾಯಗೊಳಿಸಿದನು.

ಲಕ್ಷ್ಮಣನನ್ನು ನಿಮಿತ್ತವಾಗಿಟ್ಟುಕೊಂಡು, ಶ್ರೀರಾಮಚಂದ್ರನು ಮಾಡಿದ ಈ ಸದ್ಬೋಧನೆ, ಪ್ರತಿಯೊಬ್ಬ ಮಾನವನಿಗೂ ಬದುಕಿನ ದಾರಿದೀಪ ವಾಗುವುದರಲ್ಲಿ ಸಂಶಯವಿಲ್ಲ.

---

(9ನೇ ಪುಟದಿಂದ)

ಅತಿಪ್ರಾಚೀನಕಾಲದಲ್ಲಿ ಕುಲಕ್ಷೇಮಕ್ಕಾಗಿ ನಾಗಪಂಚಮಿ ವ್ರತ ಹಿಡಿಯುತ್ತಾಳೆ ಒಬ್ಬ ಸ್ತ್ರೀ. ನಾಗನಿಗೆ ಪ್ರಿಯವಾದ ಕೇದಿಗೆಯ ಹೂವು ತರಲೆಂದು ಅಣ್ಣನನ್ನು ಕಾಡಿಗೆ ಕಳುಹಿಸುತ್ತಾಳೆ. ತಂಗಿಯ ವ್ರತಕ್ಕೆಂದು ಕೇದಿಗೆ ಹೂ ತರಲು ಹೊರಟ ಅಣ್ಣನಿಗೆ ಕಾಡೆಲ್ಲ ಸುತ್ತಿದರೂ ಬೇಕಾದ ಕೇತಕೀ ಪುಷ್ಪ ಸಿಗುವುದಿಲ್ಲ

ಚಿಂತೆಯಿಂದ ಬೆಪ್ಪಾಗಿ ನಿಂತ ಆವನ ಕಣ್ಣಿಗೆ ಅಗದೂರದ ಸರ್ಪೋದ್ಯಾನದ ಬಳಿಯ ಒಂದು ಗಿಡದಲ್ಲಿ ಕೇದಿಗೆ ಕಾಣಿಸುತ್ತದೆ. ಆನಂದದಿಂದ ಆತ ಚುಚ್ಚುವ ಮುಳ್ಳನ್ನೂ ಲೆಕ್ಕಿಸದೆ ಗಿಡದ ಹೂವು ಕೊಯ್ಯುತ್ತಾನೆ. ಕೇದಿಗೆಯ ಸುವಾಸನೆಗೆ ಆಗ ತಾನೇ ಹೊರಬಂದಿದ್ದ ಸಮೀಪದ ಹುತ್ತದೊಳಗಿನ ನಾಗ ಆತನನ್ನು ಕಡಿಯುತ್ತದೆ. ಬ್ರಾಹ್ಮಣ ಕುಮಾರ ವಿಷವೇರಿ ಸಾಯುತ್ತಾನೆ. ಕೇದಿಗೆಯ ಹೂವಿಗೆಂದು ಹೋಗಿದ್ದ ಅಣ್ಣ ಬಂದಿಲ್ಲ. ವಿಷಯವೇನೋ ಗೊತ್ತಿಲ್ಲ. ನೆನೆಸಿಕೊಂಡಿದ್ದ ಪಂಚಮೀ ವ್ರತದ ಸಮಯ ಮೀರುತ್ತಿದೆ. ಯೋಚಿಸಿದ ಆಕೆ ಸಿದ್ಧಪಡಿಸಿದ ಸಾಮಗ್ರಿಗಳೆಲ್ಲವನ್ನೂ ಹಿಡಿದು ಹುತ್ತಹುಡುಕುತ್ತಾ ಬರುತ್ತಾಳೆ. ದೈವಯೋಗವೆಂಬಂತೆ ಆಕೆ, ಅಣ್ಣ ಸತ್ತು ಬಿದ್ದಿದ್ದ ಗಿಡದ ಸಮೀಪದ ಹುತ್ತಕ್ಕೇ ಬರುತ್ತಾಳೆ. ನೋಡುತ್ತಾಳೆ ಅಣ್ಣ ಮೃತನಾಗಿದ್ದಾನೆ.

ಆಕೆ ಅಧೀರಳಾಗಲಿಲ್ಲ. ತಂದಿದ್ದ ಪೂಜಾ ಸಾಮಗ್ರಿಗಳಿಂದಲೇ ಹುತ್ತಕ್ಕೆ ಪೂಜೆ ನಡೆಸಿ ಪೂಜಾಂತ್ಯದಲ್ಲಿ ತಾನು ನಿರ್ಮಲ ಭಕ್ತಿಯಿಂದ ನಡೆಸಿದ ಪಂಚಮೀ ವ್ರತದ ಫಲ ಸತ್ಯವಾದಲ್ಲಿ ತನ್ನ ಕೈಯ ಹುತ್ತದ ಮಣ್ಣು ನನ್ನಣ್ಣನನ್ನು ಬದುಕಿಸಲಿ ಎಂದು ಪ್ರಾರ್ಥಿಸಿ ಮಣ್ಣಿಗೆ ನೀರು ಸೇರಿಸಿ ಸತ್ತಿದ್ದ ಅಣ್ಣನ ಹಣೆಗೆ ಹಚ್ಚುತ್ತಾಳೆ.

ಅಚ್ಚರಿ–ಆಕೆಯ ವ್ರತ ಪ್ರಭಾವವೋ ಎಂಬಂತೆ ಆತ ಏಳುತ್ತಾನೆ. ತನ್ನೆದುರು ನಿಂತಿದ್ದ ತಂಗಿಯನ್ನು ಭಾವಪರವಶತೆಯಲ್ಲಿ ತಬ್ಬಿಕೊಳ್ಳುತ್ತಾನೆ. ಅಣ್ಣ–ತಂಗಿಯರ ವಾತ್ಸಲ್ಯವೆಷ್ಟಿರುತ್ತದೆಂಬುದನ್ನು ಜಗಜ್ಜಾಹೀರು ಗೊಳಿಸುತ್ತಾನೆ. ಪಂಚಮೀ ವ್ರತದ ಕುರಿತಾಗಿ ಹೇಳುವ ಮಹಾತ್ಮೆಯ ಕಥೆಯಿದು. ಇಂದಿಗೂ ಪಂಚಮೀ ಹಬ್ಬಕ್ಕೆಂದು ಅಣ್ಣನ ಮನೆಗೋಡಿಬರುವ ಹಳ್ಳಿಯ ಮುಗ್ಧ ಚೆಲುವೆಯರ, ಅಣ್ಣ–ತಂಗಿಯರ ಸಂತಸೋತ್ಸಾಹ ಕಂಡರೆ ನಮಗೂ ಪಂಚಮೀ ಹಬ್ಬದ ಗಾಳಿ ತಗಲಿ ಭಕ್ತಿಪರವಶತೆಯಲ್ಲಿ ಭಾವೋನ್ಮಾದದಲ್ಲಿ ನೈಮರೆಯುವಂತೆ ನಮ್ಮನ್ನು ಮಾಡುತ್ತದೆ. ವ್ರತಾಚರಣೆಯಲ್ಲಿ ನಮಗೂ ಶ್ರದ್ಧೆಯನ್ನು ಬರಿಸುತ್ತದೆ.

ಒಟ್ಟಿನಲ್ಲಿ ನಂಬಿ ಹಾಲೆರೆವವರಿಗೆ ನಾಗ ಸುಖ ಸಂಪತ್ತುಗಳನ್ನು ಕರುಣಿಸುವವನಾಗಿದ್ದಾನೆ. ಎಂತಲೇ ಹೇಳುವುದು–"ನಾಗನಿರುವಲ್ಲಿ ನೀರು, ನೀರಿದ್ದಲ್ಲಿ ನಿಧಿ,ನಿಧಿಯಿದ್ದಲ್ಲಿ ಸಿದ್ಧಿ ವೃದ್ಧಿ ಗಳ ಫಸಲು-

(10ನೇ ಪುಟದಿಂದ)

ಕೇಳಿ ತಿಳಿದುಕೊಂಡನು. ಆಕೆಯು ಸ್ವರ್ಗಲೋಕದಿಂದ ಅಮೃತವನ್ನು ತಂದುಕೊಟ್ಟಲ್ಲಿ ದಾಸ್ಯದಿಂದ ಮುಕ್ತಿ ಹೊಂದಬಹುದೆಂದು ತಿಳಿಸಿದನು. ಇದೇ ಪ್ರಕಾರವಾಗಿ ಗರುಡನು ದೇವಲೋಕದಿಂದ ಅಮೃತವನ್ನು ತಂದು ಸರ್ಪಗಳಿಗೆ ಕೊಟ್ಟು ತನ್ನ ಮತ್ತು ತಾಯಿಯ ದಾಸ್ಯವನ್ನು ಬಿಡುಗಡೆಗೊಳಿಸುತ್ತಾನೆ. ಹಿಂದೊಮ್ಮೆ ಕದ್ರುವು ತನ್ನ ಮಕ್ಕಳಿಗೆ ಜನಮೇಜಯನ ಯಾಗದಲ್ಲಿ ಅಗ್ನಿಯಿಂದ ಭಸ್ಮವಾಗಿ ಎಂದು ಶಾಪವಿಟ್ಟಿದಳು. ಆಗ ತಕ್ಷಕನು ಆಸ್ತಿಕ ಮಹರ್ಷಿಯ ಸಹಾಯದಿಂದ ನಾಗಕುಲವನ್ನು ರಕ್ಷಿಸುತ್ತಾನೆ. ಇವೆಲ್ಲವೂ ಶ್ರಾವಣ ಶುದ್ಧ ಪಂಚಮಿಯಂದು ನಡೆದ ಕಾರಣ ಅದಿನ ನಾಗದೇವನನ್ನು ಪೂಜಿಸುತ್ತಾರೆ ನಾಗನಿಗೆ ಹಾಲೆರೆಯುತ್ತಾರೆ. ಇದರಿಂದಾಗಿ ನಿತ್ಯಜೀವನದಲ್ಲಿ ನಾಗನ ತೊಂದರೆಯು ತಪ್ಪಿ ಸರ್ವರೂ ಸುಖದಿಂದ ಬಾಳುವಂತೆ ಹರಸುವಂತೆ ನಾಗದೇವತೆಯನ್ನು ಪೂಜಿಸುತ್ತಾರೆ.

# ಶರಣ ಧನುರ್ದಾಸ

ಶ್ರೀ ಲ. ನಾ. ಶಾಸ್ತ್ರಿ

ನಮ್ಮ ದೇಶದ ನದಿಗಳಲ್ಲಿ ಕಾವೇರಿಯು ಬಹಳ ಪವಿತ್ರವಾದುದು. ಅದು ಕನ್ನಡನಾಡಿನ ಕೊಡಗು ಜಿಲ್ಲೆಯ ಭಾಗಮಂಡಲದಲ್ಲಿ ಹುಟ್ಟಿ ಅನೇಕ ಸ್ಥಳಗಳಲ್ಲಿ ಹರಿದು ತಮಿಳುನಾಡನ್ನು ಪ್ರವೇಶಿಸುತ್ತದೆ. ಅಲ್ಲಿಯೂ ಹಲವಾರು ಸ್ಥಳಗಳಲ್ಲಿ ಪ್ರವಹಿಸಿ ಕಟ್ಟಕಡೆಗೆ ಬಂಗಾಳಕೊಲ್ಲಿಯನ್ನು ಪ್ರವೇಶಿಸುತ್ತದೆ. ಈ ನದಿಯು ಹುಟ್ಟುವ, ಹರಿಯುವ, ಸಮುದ್ರ ಸೇರುವವರೆಗೆ ಇದರ ದಡದಲ್ಲಿರುವ ಪ್ರತಿಯೊಂದು ಸ್ಥಳವೂ ಪವಿತ್ರವೆನಿಸಿದೆ. ಇದರ ದಡದಲ್ಲಿ ಅನೇಕ ದೇವಾಲಯಗಳಿದ್ದು ನದಿಯು ತೀರ್ಥವೆಂದೂ, ದೇವಾಲಯವಿರುವ ಈ ಸ್ಥಳವು ಕ್ಷೇತ್ರವೆಂದೂ ಹೆಸರು ಪಡೆದಿವೆ.

ಅಂತಹ ತೀರ್ಥಕ್ಷೇತ್ರಗಳಲ್ಲಿ ಪ್ರಸಿದ್ಧವಾದುವು ಮೂರು. ಕನ್ನಡನಾಡಿನ ಮಂಡ್ಯಜಿಲ್ಲೆಯಲ್ಲಿರುವ ಶ್ರೀರಂಗಪಟ್ಟಣ, ಶಿವನ ಸಮುದ್ರ ಮತ್ತು ತಮಿಳುನಾಡಿನ ತಿರುಚಿರಾಪಳ್ಳಿಯಲ್ಲಿರುವ ಶ್ರೀರಂಗಂ. ಈ ಮೂರು ಸ್ಥಳಗಳಲ್ಲಿಯೂ ಶ್ರೀರಂಗನಾಥನ ದೇವಾಲಯಗಳಿವೆ. ಶ್ರೀರಂಗಪಟ್ಟಣಕ್ಕೆ ಆದಿರಂಗವೆಂದೂ, ಶಿವನ ಸಮುದ್ರಕ್ಕೆ ಮಧ್ಯರಂಗವೆಂದೂ, ಶ್ರೀರಂಗಕ್ಕೆ ಅಂತ್ಯರಂಗವೆಂದೂ ಕರೆಯುವ ವಾಡಿಕೆಯಿದೆ. ಇವುಗಳಲ್ಲಿ ಶ್ರೀರಂಗವು ಬಹಳ ದೊಡ್ಡ ಕ್ಷೇತ್ರವಾಗಿದ್ದು ತುಂಬಾ ಹೆಸರುವಾಸಿಯಾದುದು. ಶ್ರೀ ವೈಷ್ಣವಮತ ಪ್ರಸಾರಕರಾದ ಶ್ರೀ ರಾಮಾನುಜಾಚಾರ್ಯರು ಇದ್ದುದು ಇಲ್ಲಿಯೇ.

ಶ್ರೀರಂಗದ ದೇವಸ್ಥಾನವು ಭರತಖಂಡದಲ್ಲಿಯೇ ಅತ್ಯಂತ ವಿಸ್ತಾರವಾದುದು. ಈ ದೇವಸ್ಥಾನವು ಏಳು ಪ್ರಾಕಾರಗಳನ್ನು ಹೊಂದಿದೆ. ದೇವಸ್ಥಾನದ ಆವರಣದಲ್ಲಿಯೇ ಅನೇಕ ಜನ ವಾಸಿಸುತ್ತಿದ್ದು, ಅದು ಒಂದು ಸಣ್ಣ ಊರಿನಂತೆಯೇ ಇದೆ. ಇಲ್ಲಿ ನಡೆಯುವ ಉತ್ಸವಗಳು ಬಹಳ ಪ್ರಸಿದ್ಧವಾದುವು. ಈ ಉತ್ಸವಗಳಿಗೆ ದೂರ ದೂರದ ಸ್ಥಳಗಳಿಂದ ಸಾವಿರಾರು ಜನ ಭಕ್ತರು ಬರುತ್ತಿರುತ್ತಾರೆ.

ಇಂತಹ ಉತ್ಸವಗಳಲ್ಲಿ ಗರುಡೋತ್ಸವವೂ ಒಂದು. ಚಿನ್ನದ ದೊಡ್ಡ ಗರುಡನ ವಿಗ್ರಹದ ಮೇಲೆ ದೇವರನ್ನು ಕೂರಿಸಿ ಮೆರವಣಿಗೆ ಮಾಡುತ್ತಾರೆ. ಉತ್ಸವದಲ್ಲಿ ಮುಂದುಗಡೆ ಆನೆಯಿರುತ್ತದೆ. ಅದರ ಹಿಂದೆ ಬೆಳ್ಳಿಯ ನಗಾರಿಗಳನ್ನು ಹೊತ್ತ ಬಸವಣ್ಣ, ಅನಂತರ ಕುದುರೆಗಳು, ಅದರ ಹಿಂದೆ ಓಲಗದವರು, ಬಿರುದು ಬಾವಲಿಗಳನ್ನು ಹೊತ್ತವರು, ಭಜನೆಯ ತಂಡ, ತಮಿಳು ಪ್ರಬಂಧಗಳನ್ನು ಹೇಳುವವರು, ವೇದಪಾರಾಯಣ ಮಾಡುವವರು ಇರುತ್ತಾರೆ. ಅದರ ಹಿಂದೆ ಛತ್ರ ಚಾಮರಗಳ ಸೇವೆ ಕೈಗೊಳ್ಳುತ್ತ ಶ್ರೀರಂಗನಾಥನ ದಿವ್ಯಮೂರ್ತಿ ಇರುತ್ತದೆ. ನೋಡುತ್ತಿರುವವರ ಕಣ್ಣು, ಕಿವಿ ಮನಸ್ಸು ಎಲ್ಲವೂ ಒಂದಾಗಿ ದೇವರ ದರುಶನ ಮಾಡುತ್ತವೆ; ದೇವರ ನಾಮ ನಾಲಿಗೆಯಲ್ಲಿ ನಲಿಯುತ್ತದೆ. ದೇವರ ಮೂರ್ತಿ ಮನಸ್ಸಿನಲ್ಲಿ ನಿಲ್ಲುತ್ತದೆ.

ಬಹಳ ಹಿಂದೆ ಇಂತಹ ಒಂದು ಗರುಡೋತ್ಸವ ನಡೆಯುತ್ತಿತ್ತು. ಶ್ರೀವೈಷ್ಣವ ಸಂತರಾಗಿದ್ದ ರಾಮಾನುಜಾಚಾರ್ಯರು ಆಗ ಶ್ರೀರಂಗದಲ್ಲಿಯೇ ಇದ್ದರು. ಆ ಕಾಲದಲ್ಲಿ ಜನ ಅವರನ್ನು ಓಡಾಡುವ ರಂಗನಾಥನೆಂದೇ ನಂಬಿದ್ದರು. ದೇವರ ದರ್ಶನ ಮಾಡಿದಂತೆಯೇ ಅವರ ದರ್ಶನವನ್ನು ಮಾಡುತ್ತಿದ್ದರು. ಅವರ ಆಶೀರ್ವಾದ ಪಡೆಯುತ್ತಿದ್ದರು. ಉತ್ಸವ ನಡೆಯುತ್ತಿದ್ದ ಆ ದಿನ ರಾಮಾನುಜರೂ ಸಹ ದೇವರ ದರ್ಶನ ಮಾಡಲು ಶಿಷ್ಯರೊಡನೆ ನಿಧಾನವಾಗಿ ನಡೆದುಕೊಂಡು ಬರುತ್ತಿದ್ದರು. ಶಿಷ್ಯರು "ಗುರುಗಳು ಬರುತ್ತಿದ್ದಾರೆ ದಾರಿಬಿಡಿ" ಎಂದು ಹೇಳುತ್ತಾ ಮುಂದೆ ಸಾಗುತ್ತಿದ್ದರು. ಜನಸಂದಣಿ ಹೆಚ್ಚಾಗಿದ್ದರೂ ಸಂತ ರಾಮಾನುಜರು ಬರುತ್ತಿರುವುದನ್ನು ಕಂಡ ಜನ ದಾರಿ ಬಿಟ್ಟು ಪಕ್ಕಕ್ಕೆ ನಿಲ್ಲುತ್ತಿದ್ದರು. ರಸ್ತೆಯಲ್ಲಿಯೇ ಅವರಿಗೆ ತಲೆಬಾಗುತ್ತಿದ್ದರು, ಕೈ ಮುಗಿಯುತ್ತಿದ್ದರು, ಅಡ್ಡ ಬೀಳುತ್ತಿದ್ದರು.

ರಾಮಾನುಜರು ನಡೆದು ಬರುತ್ತಿದ್ದರು. ಶಿಷ್ಯರು ಮುಂದೆ ಮುಂದೆ ಹೋಗುತ್ತಾ ದಾರಿ ಬಿಡಿಸುತ್ತಿದ್ದರು. ಅವರಿಗೆ ದಾರಿಯಲ್ಲಿ ಒಂದು ವಿಚಿತ್ರ ದೃಶ್ಯ ಕಂಡಿತು. ಒಬ್ಬ ಗಂಡಸು ಬಲಭೀಮನಂತಿದ್ದಾನೆ, ಎಣ್ಣೆಗೆಂಪಿನ ಬಣ್ಣ, ಎತ್ತರವಾದ ನಿಲುವು, ತುಂಬಿಕೊಂಡ ಮೈಕಟ್ಟು, ಹುರಿಮೀಸೆ, ಹಿಂದಕ್ಕೆ ಬಾಚಿದ ಕೂದಲು; ಆತನ ಮುಂದೆ ಒಬ್ಬ ತರುಣಿ ನಿಂತಿದ್ದಾಳೆ. ಆಕೆ ತುಂಬಾ ಚೆಲುವೆ, ದಂತದ ಬೊಂಬೆಯಂತಿದ್ದಾಳೆ. ಆಕೆ ಮೈಮರೆತು ದೇವರನ್ನು ನೋಡುತ್ತಿದ್ದಾಳೆ. ಬೇರೆಯ ಕಡೆ ಗಮನವೇ ಇಲ್ಲ. ಆತ ಆಕೆಗೆ ಛತ್ರಿ ಹಿಡಿದಿದ್ದಾನೆ. ಬೀಸಣಿಗೆಯಿಂದ ಗಾಳಿ ಬೀಸುತ್ತಿದ್ದಾನೆ. ಅವನ ಗಮನವೆಲ್ಲ ಅವಳ ಕಡೆಗೇ ಇದೆ. ಬೇರೆಯ ಕಡೆ ಅವನ ದೃಷ್ಟಿ ಓಡುತ್ತಿಲ್ಲ. ಈ ದೃಶ್ಯವನ್ನು ಕಂಡ ಜನ ಹಾಸ್ಯಮಾಡಿ ನಗುತ್ತಿದ್ದಾರೆ. ಅವನಿಗೆ ಅದರ ಪರಿವೆಯು ಇಲ್ಲ. ಆ ಹೆಂಗಸಿನ ಮುಖಕ್ಕೆ ಬಿಸಿಲು ಬೀಳಬಾರದು, ಆಕೆಯ ಮೈಗೆ ಸೆಖೆಯಾಗಬಾರದು; ಅದರ ಕಡೆಯೇ ಅವನ ಗಮನ.

ರಾಮಾನುಜರ ಶಿಷ್ಯರೂ ಈ ದೃಶ್ಯವನ್ನು ನೋಡಿ ನಕ್ಕರು. ಸ್ವಲ್ಪ ನಿಂತು ಅವರಿಬ್ಬರನ್ನೂ ನೋಡಿ ಹಾಸ್ಯಮಾಡಿದರು. ಹಿಂದೆ ಬರುತ್ತಿದ್ದ ರಾಮಾನುಜರು "ಮಕ್ಕಳೇ, ಏಕೆ ನಿಂತಿರಿ? ಮುಂದಕ್ಕೆ ನಡೆಯಿರಿ", ಎಂದಾಗಲೇ ಅವರಿಗೆ ಎಚ್ಚರ. ಶಿಷ್ಯರು "ಗುರುಗಳೇ, ಈ ವಿಚಿತ್ರವನ್ನು ನೋಡಿರಿ, ಆ ಗಂಡಸು ಸ್ವಲ್ಪವೂ ನಾಚಿಕೆ ಇಲ್ಲದೆ ಆ ಹೆಂಗಸಿಗೆ ಛತ್ರಿ ಹಿಡಿಯುತ್ತಾ ಗಾಳಿಹಾಕುತ್ತಿದ್ದಾನೆ" ಎಂದು ನುಡಿದರು.

ರಾಮಾನುಜರು ಅತ್ತ ನೋಡಿದರು. ಆತನ ಬಗೆಗೆ ಅವರ ಮನಸ್ಸಿನಲ್ಲಿ ಮರುಕವುಂಟಾಯಿತು. ದೇವರ ಮೆರವಣಿಗೆಯಲ್ಲಿ ಸಾವಿರಾರು ಜನ ಸೇರಿರುವ ಕಡೆ, ಈತ, ಜನ ಕುಚೋದ್ಯ ಮಾಡುತ್ತಿರುವುದೂ, ತಿಳಿಯುತ್ತಿಲ್ಲವಲ್ಲ; ಎಂದು ಆತನ ವಿಷಯದಲ್ಲಿ ಅವರು ಅನುಕಂಪಪಟ್ಟರು. ಶಿಷ್ಯರನ್ನು ಕರೆದು "ಮಕ್ಕಳೇ, ದೇವರ ಉತ್ಸವವು ದೇವಾಲಯಕ್ಕೆ ಹಿಂದಿರುಗಿದ ಮೇಲೆ ಆತನನ್ನು ನಮ್ಮ ಮಠಕ್ಕೆ ಬರುವಂತೆ ಹೇಳಿ" ಎಂದು ನುಡಿದು ಮುಂದೆ ಹೊರಟರು. ಶಿಷ್ಯರು ಸ್ವಲ್ಪ ಹೊತ್ತು ಕಾದಿದ್ದು ಆತನ ಗಮನವನ್ನು ತಮ್ಮೆಡೆಗೆ ಸೆಳೆದರು. "ಅಯ್ಯಾ, ಅದೋ ಅಲ್ಲಿ ಹೋಗುತ್ತಿರುವವರು ನಮ್ಮ ಗುರುಗಳಾದ ಶ್ರೀ ರಾಮಾನುಜಾಚಾರ್ಯರು. ಅವರು ನಿನ್ನ ಹತ್ತಿರ ಮಾತನಾಡಬೇಕಂತೆ. ಇಂದು ಸಾಯಂಕಾಲ ನಮ್ಮ ಮಠಕ್ಕೆ ಬಾ" ಎಂದರು. ಆತನು "ಆಗಲಿ ಸ್ವಾಮಿ ಬರುತ್ತೇನೆ" ಎಂದು ಮತ್ತೆ ತನ್ನ ಕೆಲಸದಲ್ಲಿ ನಿರತನಾದನು.

೨

ಸಾಯಂಕಾಲವಾಯಿತು. ಆತನು ಮಠಕ್ಕೆ ಬಂದನು. ಶಿಷ್ಯರು ಆತನು ಬಂದ ವಾರ್ತೆಯನ್ನು ಗುರುಗಳಿಗೆ ತಿಳಿಸಿದರು. ರಾಮಾನುಜರು ಆತನನ್ನು ಒಳಕ್ಕೆ ಬರಹೇಳಿದರು. ಆತನು ರಾಮಾನುಜರ ಹತ್ತಿರ ಬಂದು ಕೈ ಮುಗಿದು ತಲೆ ಬಾಗಿ ನಿಂತುಕೊಂಡನು. ರಾಮಾನುಜರು ಆತನನ್ನು ಒಮ್ಮೆ ಮೇಲಿಂದ ಕೆಳಗಿನವರೆಗೆ ನೋಡಿದರು. "ಅಪ್ಪ, ನಿನ್ನ ಹೆಸರೇನು?" ಎಂದು ಮೃದುವಾಗಿ ಕೇಳಿದರು. ಆತ—

"ಸ್ವಾಮಿ, ನನ್ನ ಹೆಸರು ಧನುರ್ದಾಸ" ಎಂದನು.




"ನಿನ್ನದು ಯಾವೂರು" ಎಂದು ರಾಮಾನುಜರು ಪುನಃ ಕೇಳಿದರು.

"ತಿರುಚಿರಪಳ್ಳಿಯ ಹತ್ತಿರ ಇರುವ ನಿಚುಲಾಪುರಿ ಎಂಬ ಗ್ರಾಮದಲ್ಲಿ ವಾಸ ಮಾಡುತ್ತಿದ್ದೇನೆ" ಎಂದು ಆತ ಉತ್ತರಿಸಿದನು.

"ಯಾವ ಕೆಲಸ ಮಾಡುತ್ತಿದ್ದೀಯೆ?"

"ಸ್ವಾಮಿ, ನಾವು ಮಲ್ಲರ ವಂಶಕ್ಕೆ ಸೇರಿದವರು, ಜಟ್ಟಿಗಳು, ನಾನು ನಮ್ಮ ಗ್ರಾಮದ ಜಟ್ಟಿಗಳಿಗೆಲ್ಲ ಮುಖ್ಯಸ್ಥನಾಗಿದ್ದೇನೆ".

"ಅಪ್ಪ, ನಿನ್ನೊಡನೆ ಇದ್ದ ಆ ಹೆಂಗಸು ಯಾರು?"

"ಸ್ವಾಮಿ, ಆಕೆ ನನ್ನ ಪ್ರೇಯಸಿಯಾದ ಕನಕಾಂಬೆ. ನಾನು ವಿವಾಹವಾಗಬೇಕೆಂದಿರುವ ಹೆಣ್ಣು".

"ಏನಪ್ಪ ನೂರಾರು, ಸಾವಿರಾರು ಜನರ ಮಧ್ಯದಲ್ಲಿ ಸ್ವಲ್ಪವೂ ನಾಚಿಕೆಯಿಲ್ಲದವನಂತೆ ನೀನು ನಡೆದುಕೊಂಡೆಯಲ್ಲ, ತಿಳಿಗೇಡಿಯಂತೆ ವರ್ತಿಸಿದೆಯಲ್ಲ, ನಡು ರಸ್ತೆಯಲ್ಲಿ ದೇವರ ಮೆರವಣಿಗೆ ಸಾಗುತ್ತಿರುವಾಗ ಆ ಹೆಂಗಸಿಗೆ ಛತ್ರಿ ಹಿಡಿದು ಗಾಳಿಹಾಕುತ್ತಿದ್ದೆಯಲ್ಲ. ನಿನಗೆ ಸ್ವಲ್ಪವಾದರೂ ತಿಳುವಳಿಕೆ ಬೇಡವೆ?" ಎಂದು ರಾಮಾನುಜರು ಕೇಳಿದರು.

"ಸ್ವಾಮಿ, ಆಕೆ ಬಲು ಚೆಲುವೆ. ಅಂತಹ ಸುಂದರಿಯನ್ನು ನಾನೆಲ್ಲಿಯೂ ಕಾಣೆ. ಆಕೆಯ ಮೈ ಹೂವಿನಂತೆ ತುಂಬಾ ಮೃದು. ಆಕೆಯ ಕಣ್ಣುಗಳು ಅರಳಿದ ತಾವರೆಯಂತೆ ಬಲು ಸುಂದರ. ಬಿಸಿಲಿಗೆ ಆಕೆಯ ಮೈ ಬಾಡಿದರೆ ನನ್ನ ಕರುಳು ಚುರ್ ಎನ್ನುತ್ತದೆ. ಆಕೆಯು ಸೆಖೆಯಿಂದ ಬಳಲಿದರೆ ನನ್ನ ಪ್ರಾಣವೇ ಹೋದಂತಾಗುತ್ತದೆ! ಆಕೆಯೇ ನನ್ನ ಸರ್ವಸ್ವ. ಆಕೆಯನ್ನು ಬಿಸಿಲಿನ ಬೇಗೆಯಿಂದ, ಸೆಖೆಯಿಂದ ಕಾಪಾಡುವುದೇ ನನಗೆ ಮುಖ್ಯ" ಎಂದು ಆತ ನುಡಿದನು.

ರಾಮಾನುಜರಿಗೆ ಆತನ ಮಾತು ಕೇಳಿ ಆಶ್ಚರ್ಯವಾಯಿತು. "ಆಕೆಯನ್ನು ಈ ಬಿಸಿಲಿನಲ್ಲಿ ಕರೆದುಕೊಂಡು ಬರದೆ ಮನೆಯಲ್ಲಿಯೇ ಬಿಡಬಹುದಾಗಿತ್ತಲ್ಲ? ಏಕೆ ಕರೆದುಕೊಂಡು ಬಂದೆ? ಕರೆದುಕೊಂಡು ಬಂದು ಹಾಸ್ಯಕ್ಕೆ ಏಕೆ ಗುರಿಯಾದೆ?" ಎಂದು ಕೇಳಿದರು.

"ಸ್ವಾಮಿ, ಆಕೆಗೆ ಶ್ರೀರಂಗನಾಥನಲ್ಲಿ ತುಂಬಾ ಭಕ್ತಿ. ಈ ಉತ್ಸವವನ್ನು ನೋಡಬೇಕೆಂದು ಬಹಳ ಆಸೆ ಪಟ್ಟಳು. ಆದ್ದರಿಂದ ಆಕೆಯನ್ನು ಕರೆದುಕೊಂಡು ಬಂದೆ" ಎಂದು ಧನುರ್ದಾಸನು ಹೇಳಿದನು.

ಆಗ ರಾಮಾನುಜರು "ಅಯ್ಯಾ ನೀನು ಆಕೆ ತುಂಬಾ ಚೆಲುವೆಯೆಂದು ಹೇಳಿದೆ. ಆಕೆಯ ಕಣ್ಣುಗಳು ಅರಳಿದ ತಾವರೆಯಂತೆ ಸುಂದರವೆಂದೂ ಹೇಳಿದೆಯಲ್ಲವೆ? ಈ ರಾತ್ರಿ ನನ್ನೊಡನೆ ಬಾ ನಿನಗೆ ಆಕೆಗಿಂತ ತುಂಬಾ ಶ್ರೇಷ್ಠವಾದ ಸೌಂದರ್ಯ, ರಾಶಿಯನ್ನೂ, ದಿವ್ಯವಾದ ಕಣ್ಣುಗಳನ್ನೂ ತೋರಿಸುತ್ತೇನೆ" ಎಂದರು.

ಆತನು "ಆಗಲಿ ಸ್ವಾಮಿ" ಎಂದು ಹೇಳಿ ಹಿಂದಿರುಗಿದನು.

ರಾಮಾನುಜರು ಆ ರಾತ್ರಿ ಧನುರ್ದಾಸನನ್ನು ಕರೆದುಕೊಂಡು ರಂಗನಾಥನ ಗುಡಿಗೆ ಬಂದರು. ಆತನನ್ನು ತಮ್ಮ ಹತ್ತಿರವೇ ನಿಲ್ಲಿಸಿಕೊಂಡು "ಅಪ್ಪಾ, ಅದೋ ಆ ದಿವ್ಯ ಸುಂದರನಾದ ಶ್ರೀ ರಂಗನಾಥನನ್ನು, ಆತನ ಆ ಕಣ್ಣುಗಳನ್ನೂ ನೋಡು" ಎಂದು ದೇವರತ್ತ ತೋರಿಸಿದರು. ಧನುರ್ದಾಸ ತನ್ನ ದೃಷ್ಟಿಯನ್ನು ದೇವರ ವಿಗ್ರಹದತ್ತ ತಿರುಗಿಸಿದನು. ಆದಿಶೇಷನ ಮೇಲೆ ಪವಡಿಸಿದ ಶ್ರೀರಂಗನಾಥನು ಅವನಿಗೆ ವಿಗ್ರಹದಂತೆ ಕಾಣಲೇ ಇಲ್ಲ. ಜೀವಂತ ಮೂರ್ತಿಯಾಗಿಯೇ ಕಂಡಿತು. ಆ ಕಣ್ಣುಗಳು ತನ್ನನ್ನೇ ನೋಡುತ್ತಿರುವಂತೆ ಭಾಸವಾಯಿತು. ಆ ಕಣ್ಣುಗಳಲ್ಲಿ ಬೆಳಕು ಹರಿದು ಬರುತ್ತಿರುವಂತೆ ಕಾಣಿಸಿತು. ನೋಡುತ್ತ ನೋಡುತ್ತ ಧನುರ್ದಾಸ ಮೈಮರೆತನು. ಎಷ್ಟು ಹೊತ್ತು ಹಾಗೆಯೇ ನಿಂತನೋ ಅವನಿಗೇ ತಿಳಿಯದು. ರಾಮಾನುಜರಿಗೆ ಆಶ್ಚರ್ಯವಾಯಿತು. ಸಂತೋಷವೂ ಆಯಿತು. ಧನುರ್ದಾಸ ಎಷ್ಟು ಬೇಗ ತನ್ನ ಮನಸ್ಸನ್ನು ದೇವರೆಡೆಗೆ ತಿರುಗಿಸಿದ! ಎಷ್ಟು ಬೇಗ ಮನಸ್ಸನ್ನು ದೇವರಲ್ಲಿಯೇ ನಿಲ್ಲಿಸಿದ.

ದೇವಾಲಯದ ಕೆಲಸಗಳೆಲ್ಲವೂ ಮುಗಿದವು ನೌಕರರೆಲ್ಲರೂ ಮನೆಗೆ ಹೋಗುವ ಸಮಯವಾಯಿತು. ಧನುರ್ದಾಸ ಮೈಮರೆತು ನಿಂತೇ ಇದ್ದ. ಅನಂತರ ಗಂಟೆ, ಜಾಗಟೆಗಳನ್ನು ಬಾರಿಸಿದ ಸದ್ದು ಕೇಳಿ ಅವನಿಗೆ ಎಚ್ಚರವಾಯಿತು. ಅವನು ತನ್ನ ದೃಷ್ಟಿಯನ್ನು ಬಲವಂತವಾಗಿ ತಿರುಗಿಸಿ ರಾಮಾನುಜರ ಪಾದಗಳ ಮೇಲೆ ತಲೆಯಿಟ್ಟು ನಮಸ್ಕರಿಸಿದನು. "ಸ್ವಾಮಿ, ನನಗೆ ನೀವೇ ತಾಯಿತಂದೆ ಬಂಧುಬಳಗ. ನನ್ನನ್ನು ತಮ್ಮ ಸೇವಕನನ್ನಾಗಿ ಮಾಡಿಕೊಂಡು ನನಗೆ ಸನ್ಮಾರ್ಗ ತೋರಿಸಿ" ಎಂದು ಕೇಳಿಕೊಂಡನು.

(25ನೇ ಪುಟ ನೋಡಿ)

# ರಾಸಲೀಲೆಯಲ್ಲಿ ಸ್ತ್ರೀ ಧರ್ಮ

ಶ್ರೀ ಕೃಷ್ಣನ ಲೀಲಾವತಾರವನ್ನು ।
ಕೊಂಡಾಡುವೆ ಶ್ರವಣ ಮನನ ಮಾಡುವೆ॥

—ಎಂದು ಹೇಳಿದ ಶ್ರೀಪ್ರಸನ್ನವೆಂಕಟ ದಾಸರು ವಿಜಾಪೂರ ಜಿಲ್ಲೆಯ ಬಾಗಲಕೋಟೆಯವರು. ಇವರು ತಿರುಪತಿ ತಿಮ್ಮಪ್ಪನ ಭಕ್ತರು. ಆತನ ಅನುಗ್ರಹದಿಂದ 'ಪ್ರಸನ್ನ ವೆಂಕಟ' ಎಂಬ ಮುದ್ರಿಕೆಯನ್ನು ಪಡೆದು ಶ್ರೇಷ್ಠ ಹರಿದಾಸರಾದರು. ಭಕ್ತ ಕವಿಗಳಾದ ಇವರು ಅನೇಕ ಪದಪದ್ಯಗಳನ್ನು ಹಾಗೂ ಭಾಗವತ (ದಶಮಸ್ಕಂಧ ಪೂರ್ವಾರ್ಧ) ವನ್ನು ಕನ್ನಡದಲ್ಲಿ ರಚಿಸಿದ್ದಾರೆ.

ಎಣಿಸಲೆನ್ನಯ ನುಡಿತಪ್ಪುಗಳನು
ಮಾನುಷೋತ್ತಮ ಮುಖ್ಯರು
ಕನ್ನಡುಕ್ತಿಗಳಿವು ಎನ್ನದೆ
ಕೇಳಿರಿ ಘನರು ದಯಾಪರರು

"ಉತ್ತಮ ಮಾನವರು ನನ್ನ ನುಡಿಗಳ ತಪ್ಪನ್ನು ಎಣಿಸಬಾರದು, ಇವು ಕನ್ನಡ ಮಾತುಗಳೆಂದು ಹೀಯಾಳಿಸಬಾರದು ದಯಾಪರದೃಷ್ಟಿಯಿಂದ ಸ್ವೀಕರಿಸಬೇಕು" ಎಂದು ತಮ್ಮ ವಿನಯವನ್ನು ಕನ್ನಡ ಅಭಿಮಾನವನ್ನು ವ್ಯಕ್ತಪಡಿಸಿದ್ದಾರೆ.

ಶ್ರೋತವ್ಯವು ಇದೆ ಮಂತವ್ಯವು ಇದೆ,
ಧ್ಯಾತವ್ಯವು ನಮಗೆ ।
ಪೂತಹರಿಗುಣಗಾಥೇಯವು ಮುಕುತಿ
ಪಾಥೇಯವು ನಮಗೆ ॥

ಶ್ರೀಕೃಷ್ಣನ ಗುಣಗಾನ ಮಾಡುವ ಭಾಗವತವು ಕೇಳತಕ್ಕದ್ದು ಮನನ ಮಾಡುತಕ್ಕದ್ದು ಧ್ಯಾನಿಸತಕ್ಕದ್ದು ಆಗಿದೆ ಇದು ಮುಕ್ತಿಗೆ ದಾರಿಯ ಬುತ್ತಿಯು ಎಂದು ಭಾಗವತದ ಬಗ್ಗೆ ಹೇಳಿದ್ದಾರೆ. ಪ್ರಸನ್ನ ವೆಂಕಟ ಭಾಗವತದಲ್ಲಿ 67 ಪದ್ಯಗಳಿದ್ದು ಶ್ರೀಕೃಷ್ಣ ಜನನ ಹಾಗೂ ಬಾಲಲೀಲೆಗಳನ್ನು ಸರಸವಾಗಿ ಬೇರೆ ಬೇರೆ ರಾಗಗಳಲ್ಲಿ ಬಣ್ಣಿಸಿದ್ದಾರೆ. ಇವುಗಳಲ್ಲಿ ಒಂದಾದ ರಾಸಕ್ರೀಡೆಯು ರಸಘಟ್ಟಿಯಾಗಿದೆ. ಮನೋಹರವೂ ಬೋಧಪ್ರದವೂ ಆಗಿದೆ.

ಕಾಮನಯ್ಯನ ಕಾಮಿನಿಯರ
ಕಾಮುಕಭಕ್ತಿಯೇ ಮುಕ್ತಿ
ಸೋಮಕುಲಾಬ್ಧಿ ಸೋಮ ನೀರದ
ಶಾಮನ ಪ್ರೇಮ ಪಾತ್ರರು

ಕಾಮನಯ್ಯನಾದ ಶ್ರೀ ಕೃಷ್ಣನಲ್ಲಿ ಉಚ್ಚಮಟ್ಟದ ಭಕ್ತಿಯನ್ನಿಟ್ಟವರು ಗೋಪಕಾಮಿನಿಯರು. ಚಂದ್ರವಂಶವೆಂಬ ಸಮುದ್ರಕ್ಕೆ ಚಂದ್ರನಂತಿದ್ದ ಮೇಘ ಶ್ಯಾಮನಾದ ಕೃಷ್ಣನ ಪ್ರೇಮಕ್ಕೆ ಪಾತ್ರರಾದವರು ಇವರು.

ರಾಸಕ್ರೀಡೆಯಲ್ಲಿ ಶ್ರೀ ಕೃಷ್ಣನೇ ಕೇಂದ್ರಬಿಂದು. ಆತನ ಪರಿಸರದಲ್ಲಿ ಇರುವ ಗೋಪಿಯರು ಅವನನ್ನು ಪರಮ ಪ್ರೀತಿಯಿಂದ ಕಂಡರು. ಸಾತ್ವಿಕ ರತಿಯು ಉಕ್ಕೇರಿ ಬಂದಾಗ ಆತನೊಡನೆ ರಮಿಸಿ ಕ್ರೀಡೆಯಾಡಲು ಬಯಸಿದರು. ವಿಶಿಷ್ಟವಾದ ಭಾವೋದ್ರೇಕವೇ ರಾಸನೃತ್ಯದ ಉದ್ದೇಶವಿರಬೇಕು. ಇಲ್ಲಿ ಶೃಂಗಾರಾದಿ ರಸಗಳು ಪ್ರಧಾನವಾಗಿ ಕಂಡರೂ ಇವುಗಳ ಹಿನ್ನೆಲೆಯಲ್ಲಿ ವ್ಯಾಪಕವಾದ ಸ್ನೇಹ (ಭಕ್ತಿ) ರಸವು ಸರಾಗವಾಗಿ ಹರಿದಿದೆ.

ಚಂದ್ರೋದಯವು ರಾಸಲೀಲೆಯ ಶೃಂಗಾರ ಸೌಂದರ್ಯಗಳನ್ನು ಹೆಚ್ಚಿಸಿದೆ.

ಮುಗ್ಧಾಂಗಿಯಳ ಮುಖವನು ಪ್ರಿಯನು
ಸ್ನಿಗ್ಧ ಸುಹಾಸದಲಿ ಚುಂಬಿಸುವಂತೆ
ದುಗ್ಧಾಬ್ಧಿ-ಜಾತನುದಯದಲಿ ಪ್ರಾಕ್
ದಿಗ್ವಧು ಸಂಗವು ದೊರೆಯಲು

ಮುಗ್ಧ ಸುಂದರ ಹೆಣ್ಣುಮಗಳೊಬ್ಬಳನ್ನು ಅವಳ ಪ್ರಿಯತಮನು ಸ್ನೇಹಪೂರಿತ ಮುಗುಳ್ನಗೆಯಿಂದ ಮುದ್ದಿಡುವಂತೆ ಶೋಭಿಸುವ ಹಾಲಿನ ಸಮುದ್ರದಿಂದ ಹುಟ್ಟಿದ ಚಂದ್ರಮನು ಪೂರ್ವದಿಕ್ಕೆಂಬ ವಧುವಿನೊಡನೆ ಸಂಗಮವಾದಂತೆ ಉದಯವಾದನು. (ಚಂದ್ರೋದಯವಾಯಿತು) ಗೋಪಾಲಕ ವಧುಗಳಿಗೆ ಕಾಮನ ಸುಗ್ಗಿಯಾಯಿತು. ಇದೇ ವೇಳೆಯಲ್ಲಿ ಶ್ರೀಕೃಷ್ಣನ ವೇಣುನಾದ ಕೇಳಿಸಿತು. ಶರತ್ಕಾಲದ ಬೆಳದಿಂಗಳು ಕೀರ್ತಿಯಂತೆ ವ್ಯಾಪಿಸಿತು. ವೇಣುನಿನಾದ ಬೆಳದಿಂಗಳ ರಾತ್ರಿಗಳು ಗೋಪಿಯರ ಮನಸ್ಸನ್ನು ಕದಡಿದವು. ಶೃಂಗಾರವನ್ನು ಹೆಚ್ಚಿಸಿದವು. ಶೃಂಗಾರಕೆ ಏನ ಮಾಧುರ್ಯ- ಎನ್ನುವಂತೆ ಗೋಪಿಯರು ಶೃಂಗಾರ ರಸದಲ್ಲಿ ಓಲಾಡಿದರು.

ಶಶಿಮುಖಿಯರ ತಾಪಪಡಗಿಸಲು ಶಶಿಯು ತನ್ನ ಶೀತಲ ಮೃದುವಾದ ಕರ (ಕಿರಣ) ಗಳನ್ನು ಪಸರಿಸಲು ಸೂರ್ಯನ ತಾಪವಡಗಿತು. ಆದರೆ ಗೋಪಿಯರ ಕಾಮ ತಾಪವಡಗಲಿಲ್ಲ, ಹೆಚ್ಚುತ್ತ ಹೋಯಿತು. ಶ್ರೀ ಲಕ್ಷ್ಮಿಯ ಮುಖವು ಕೆಂಪು ಕುಂಕುಮದಿಂದ ಶೋಭಿಸುವಂತೆ ಶರದೃತುವಿನ ಚಂದ್ರಬಿಂಬವು ಆಕಾಶದಲ್ಲಿ ಶೋಭಿಸಲು ಶ್ರೀಕೃಷ್ಣನು ಅನೇಕ ಮಂಜುಳ ರಾಗಗಳಲ್ಲಿ ತನ್ನ ಕೊಳಲನ್ನು ನುಡಿಸಿದನು. ಈ ವೇಣು



ವಿದ್ವಾನ್ ಭೀಮಾಚಾರ್ಯ ಗುಡಿ

ನಾದ ಕೇಳಿ ಗೋಪಿಯರು ಕಾಮವಶರಾದರು. ಶ್ರೀ ಕೃಷ್ಣನನ್ನು ಕೂಡಬೇಕೆಂಬ ಬಯಕೆ ಅವರಲ್ಲಿ ಬಲವತ್ತರವಾಯಿತು.

ಶ್ರೀ ಕೃಷ್ಣನ ಕಡೆಗೆ ಮನೋವೇಗದಿಂದ ಧಾವಿಸುತ್ತಿರುವ ಗೋಪನಲ್ಲೆಯರು ಲಜ್ಜೆಯಿಲ್ಲದೆ ಮನೆಪಾರು ಮಕ್ಕಳು ಪುರುಷರನ್ನು ಬಿಟ್ಟು ಬಂದರು. ದೈನಂದಿನ ಜಟುವಟಿಕೆಗಳನ್ನು ಮರೆತರು. ಹಿಂಡಿದ ಹಾಲನ್ನು ಅಲ್ಲಿಯೇ ಬಿಟ್ಟರು. ಮಕ್ಕಳಿಗೆ ಮೊಲೆಯುಣಿಸಲಿಲ್ಲ. ಕೈಬಳೆಗಳನ್ನು ಕಾಲಿಗೆ ಕಡಗಳನ್ನು ಕೈಗೆ ತೊಡಿಸಿದರು. ಕರ್ಣಕುಂಡಲಗಳನ್ನು ಮೂಗಿಗೆ, ಮೂಗುತಿಯನ್ನು ಕಿವಿಗೆ ಇಟ್ಟರು. ಕೊರಳ ಮಾಲೆಗಳನ್ನು ಟೊಂಕಕ್ಕೆ, ಒಡ್ಯಾಣವನ್ನು ಕೊರಳಿಗೆ ಸುತ್ತಿದರು. ಅಡ್ಡ-ಬಂದವರನ್ನು ದೂರ ಸರಿಸಿ ಶ್ರೀಕೃಷ್ಣನ ಹತ್ತಿರ ಧಾವಿಸಿ ಬಂದರು. ಮನೆಯ ಧವ (ಪತಿ) ನನ್ನು ಬಿಟ್ಟು ಮಾಧವನಲ್ಲಿ ಭಕ್ತಿ ಇಟ್ಟರು. ವಿಷ್ಣು ಭಕ್ತಿಯುಳ್ಳ ಇವರು ವೇಣುನಾದದ ರಸವನ್ನು ಸವಿದರು. ಪ್ರಿಯನ ವಿಯೋಗವು ದುಸ್ಸಹವಾಗಲು ತ್ರಿಗುಣಗಳನ್ನು ಬಿಟ್ಟು ಕೇವಲ ಭಕ್ತಿಭಾವದಲ್ಲಿಯೇ ಬೆರೆತರು. ಕಾಮುಕ ಭಕ್ತಿಯಿಂದ ಅಚ್ಯುತನನ್ನು ನೆನೆದರು. ತಮ್ಮ ದೇಹಭಾವವನ್ನೆ ಮರೆತರು. ಅಸಂಪ್ರಜ್ಞಾತ (ಹೊರಗಿನ ಅರಿವಿಲ್ಲದ) ಯೋಗಿಯಂತೆ ಇದ್ದರು.

ಅವ್ಯಕ್ತನೂ ಅಪ್ರಮೇಯನೂ ಗುಣಗಣನಿಧಿಯೂ ಆದ ಶ್ರೀಕೃಷ್ಣನು ಮೋಹಿಸಿ ಬಂದ ಗೋಪಿಕಾ ಸ್ತ್ರೀಯರಿಗೆ ತನ್ನ ಸ್ನೇಹವನ್ನು ವ್ಯಕ್ತಮಾಡಿದನು. ಭಕ್ತಿ-ಜ್ಞಾನಾತ್ಮಕ ಮೂರ್ತಿಯಾದ ಅವನು ಭಕ್ತಿಭಾವ ಪೂರಿತರಾದ ಗೋಪಿಯರಿಗೆ ತನ್ನ ಪ್ರೇಮ ಬೀರಿದನು. ದಿವ್ಯಜನ ಗುರುವಾದ ಕೃಷ್ಣನು ಅವರಿಗೆ ದಿವ್ಯಜ್ಞಾನೋಪದೇಶ ಮಾಡಿದನು.

“ಈಗ ನಿಮ್ಮ ಆಗಮನವೇಕೆ? ಈ ಘೋರ ರಾತ್ರಿಯಲ್ಲಿ ನಿಮ್ಮ ವಿಹಾರವೇಕೆ? ಕೋಮಲಾಂಗಿಯರಾದ ನಿಮಗೆ ಇದು ಉಚಿತವಲ್ಲ. ನಿಮ್ಮ ಪತಿಪುತ್ರರನ್ನು ಬಂಧು ಬಾಂಧವರನ್ನು ಹುಡುಕಿರಿ. ಅವರು ಕಾಣದಂತಾದರೆ ದುಃಖ ಮಾಡುವುದು ಅಧರ್ಮ. ಇಲ್ಲಿಯವರೆಗೆ ಸಾಗಿ ಬಂದುದಕ್ಕೆ ಹೂಗೊಂಚಲ ಗಿಡಬಳ್ಳಿಗಳಿಂದ ಕೂಡಿದ ರಮಣೀಯವಾದ ವನಗಳನ್ನು, ಯಮುನಾನದಿಯ ಸೌಂದರ್ಯವನ್ನು ಕಣ್ತುಂಬ ನೋಡಿದಿರಿ. ನನ್ನದರ್ಶನ ಪಡೆದಿರಿ, ಇನ್ನು ಹೊರಡಿರಿ” ಎಂದು ಹೇಳುತ್ತಾ;

ಸ್ತ್ರೀಯರ ಜನ್ಮಕ್ಕೆ ವರ್ಯರ
ಸೇವೆಯೇ ಮುಖ್ಯವು
ನಿಮ್ಮಾಳ್ವ ಅತ್ತೆಮಾವ ಪುರುಷರಲು
ಉಪೇಕ್ಷೆ ಸಮ್ಮತವಲ್ಲ
ಅನ್ಯ ಪುರುಷರಾ ಸೇವೆಯು ಸಖ್ಯ
ಸಂಭಾಷಣೆ ಸಹವಾಸವು ಧರ್ಮವಲ್ಲ

ಎಂದು ಪತಿವ್ರತಾ ಧರ್ಮದ ತಿರುಳನ್ನು ತಿಳಿಸಿದನು. ಇಲ್ಲಿ ಹೇಳಿದ ಸ್ತ್ರೀ ಧರ್ಮ ನೀತಿಯು ಬೋಧಪ್ರದವಾಗಿದೆ. ಮನೋಹರವಾಗಿದೆಯಷ್ಟೇ ಅಲ್ಲ, ಸ್ತ್ರೀನೀತಿಯ ಸಾರವೂ ಇಲ್ಲಿದೆ.

“ಇನ್ನೇಕೇ ಈ ಜನ್ಮವು ಹರೇ ಹರೇ ವ್ಯರ್ಥವಾಯಿತು”- ಎಂದು ಗೋಪಿಯರು ಗೋಳಿಟ್ಟರು. ಕೃಷ್ಣನನ್ನೇ ನಂಬಿಬಂದ ಅವರನ್ನು ನಿರಾಕರಿಸಿ ಧರ್ಮೋಪದೇಶ ಮಾಡಿದಾಗ ಗೋಪಿಯರ ಹೃದಯ ತಾಪ ಹೆಚ್ಚಿತು. ಕಣ್ಣೀರು ಧಾರೆಸುರಿಯಿತು. ಪೊನ್ನಗೊಡ ಮೊಲೆಯ ಗಂಧಾನುಲೇಪನದೊಂದಿಗೆ ಹೊನ್ನ ಕುಸ್ಪುಸವು ಆರ್ದ್ರವಾಯಿತು. ಪ್ರಿಯಕರನಾದ ಕೃಷ್ಣನು ಏನಾದರೂ ಪ್ರೀತಿಯ ಮಾತುಗಳನ್ನು ನುಡಿದಾನು, ಎಂದು ಗದ್ಗದ ಕಂಠದಿಂದ (ದುಃಖದಿಂದ) ಮಾತನಾಡಿದರು.

“ಕೃಷ್ಣಾ ನೀನು ಹೇಳುವ ಉಪದೇಶ ನಮಗೆ ಇಷ್ಟವಿಲ್ಲ. ನಾವು ಕಷ್ಟದಿ ನೊಂದೆವು. ಸಮಸ್ತ ವಿಷಯಗಳನ್ನು ಬಿಟ್ಟು ಬಂದಿರು

(25 ನೇ ಪುಟ ನೋಡಿ)

# ಶ್ರೀಕೃಷ್ಣಲೀಲಾತರಂಗಿಣಿ

ಭಾಗವತ ಮಹಾಪುರಾಣದಿಂದ ಪ್ರಾರಂಭವಾದ ಕೃಷ್ಣ ಭಕ್ತಿ ರಸಧಾರೆ, ಭಾರತೀಯ ಸಾಹಿತ್ಯದಲ್ಲಿ ವಿವಿಧ ರೂಪಗಳನ್ನು ಪಡೆದು, ವಿವಿಧ ಭಾಷೆಗಳಲ್ಲಿ ಪ್ರವಹಿಸಿದೆ. ಲಾಲಿತ್ಯವೇ ರೂಪುಪಡೆದಂತೆ, ಕಮನೀಯತೆ ರಮಣೀಯತೆಗಳು ಹುರಿಗೊಂಡಂತೆ, ಮಾನವನು ಕಲ್ಪಿಸಿಕೊಳ್ಳಬಹುದಾದ ಸಕಲ ಭವ್ಯತೆಯೂ, ಸಕಲ ಸೊಬಗೂ ಮಾನವಾಕಾರ ತಾಳಿದಂತೆ - ಕೃಷ್ಣಾವತಾರ - ಭಾರತೀಯ ಸಾಹಿತ್ಯದಲ್ಲಿ ರಸಧಿಯಾಗಿದೆ. ಯಾರೆಷ್ಟು ಸವಿದರೂ ಸವೆಯದ ರಸ ದೊರತೆಯಾಗಿದೆ. ಲೀಲಾಶುಕನ ಶ್ರೀಕೃಷ್ಣ ಕರ್ಣಾಮೃತ, ಜಯದೇವನ ಗೀತಗೋವಿಂದ, ರುದ್ರಭಟ್ಟನ ಜಗನ್ನಾಥ ವಿಜಯ, ಸೂರದಾಸನ ಸೂರಸಾಗರ........ ಕೃಷ್ಣಚರಿತೆಯನ್ನು ಬರೆದ ಕವಿಗಳು ಭಾರತೀಯ ಸಾಹಿತ್ಯದಲ್ಲಿ ನೂರಾರುಮಂದಿಯುಂಟು– ಕಾವ್ಯಗಳು ನೂರಾರು ಸಾವಿರಾರುಂಟು. ಕೃಷ್ಣನ ಕಥೆಯಿಲ್ಲದ ಕಾವ್ಯಗಳು ಭಾರತೀಯ ಭಾಷೆಗಳಲ್ಲಿ ಅಪರೂಪ. ಈ ಕೃಷ್ಣಭಕ್ತಿ ಪರಂಪರೆಯಲ್ಲಿ ಇನ್ನೊಂದು ಗಣನೀಯ ರಚನೆ – ಶ್ರೀ ನಾರಾಯಣತೀರ್ಥರು ಬರೆದ ಶ್ರೀಕೃಷ್ಣಲೀಲಾತರಂಗಿಣಿ. ಆಂಧ್ರಪ್ರದೇಶದ ಗುಂಟೂರು ಜಿಲ್ಲೆಗೆ ಸೇರಿದ ಕಾಜಾ ಎಂಬ ಗ್ರಾಮದಲ್ಲಿದ್ದ ಗೋವಿಂದಶಾಸ್ತ್ರಿ, ಸನ್ಯಾಸ ಸ್ವೀಕರಿಸಿ ನಾರಾಯಣತೀರ್ಥನಾದ. ಈತನ ಕಾಲದ ಬಗ್ಗೆ ಖಚಿತ ನಿರ್ಣಯಕ್ಕೆ ಬರಲು ಸಾಧ್ಯವಾಗುವುದಿಲ್ಲ. ನಮ್ಮ ದೇಶದಲ್ಲಿ ಕವಿಗಳ ಬಗ್ಗೆ ಭಾವುಕತೆಯ ಆಧಾರದ ಮೇಲೆ ದಂತಕಥೆಗಳು ತಯಾರಾದವೇ ಹೊರತು ಐತಿಹಾಸಿಕ ದೃಷ್ಟಿಯಿಂದ ಅಗತ್ಯ ದಾಖಲಾತಿಗಳೆಂದು ಪೂರ್ವಿಕರು ಯೋಚಿಸಲಿಲ್ಲ. ಆ ಕವಿಗಳು ಸಹ ತಮ್ಮ ಸ್ವಂತ ಜೀವನದ ಬಗ್ಗೆ ಅಷ್ಟಾಗಿ ಹೇಳಿಕೊಂಡಿಲ್ಲ. ಅವರಿಗದು ಅನಾವಶ್ಯಕವಾಗಿ ಕಂಡು ಬಂದಿತಬಹುದು. ಆದರೆ ಇಂದಿನವರಿಗದು ಭಾರೀನಷ್ಟವಾದಂತೆ ಕಾಣುತ್ತದೆ. ಅಥವ ಸಂಶೋಧಕರ ಊಹಾಶಕ್ತಿಗೆ ಸಾಣೆ ಹಿಡಿಯುವ ಉದ್ದೇಶದಿಂದ ಹಾಗೆ ಮಾಡಿದರೊ-ಭಗವಂತ ಬಲ್ಲ. ಏನೇ ಆಗಲಿ ನಾರಾಯಣತೀರ್ಥನ ಕಾಲ ಸುಮಾರು ಕ್ರಿ. ಶ. 1675 ಇರಬಹುದೆಂದು ಪಂಡಿತರು ಅಭಿಪ್ರಾಯ ಪಟ್ಟಿದ್ದಾರೆ. ಸುಮಾರು 70 ವರ್ಷಕಾಲ ಈತ ಜೀವಿಸಿರಬಹುದೆಂದು ತಿಳಿದು ಬರುತ್ತದೆ.

ಕಲಾವಿದನಿಗಿಂತ ಕಲೆ ದೊಡ್ಡದು. ಕವಿಗಿಂತ ಕಾವ್ಯ ದೊಡ್ಡದು, ವ್ಯಕ್ತಿಗಿಂತ ಅವನು ಮಾಡಿದ ಕಾರ್ಯ ದೊಡ್ಡದು- ನಿಜ. ಆದರೆ ಕವಿಗಳನ್ನೂ ಅವರ ಸ್ವಂತ ಬಾಳಿನ ಘಟನಾವಳಿಗಳನ್ನೂ—ಅವರ ನೋವು ನಲಿವುಗಳನ್ನೂ ಕಡೆಗಣಿಸುವುದು ಅಷ್ಟೇನೂ ಸೂಕ್ತವಲ್ಲ.

ಶ್ರೀ ನಾರಾಯಣತೀರ್ಥ ಒಬ್ಬ ಸಿದ್ಧಪುರುಷ-ಯೋಗಿ, ರಸಸಿದ್ಧಕವಿ. ಶಾಂಡಿಲ್ಯ ಭಕ್ತಿ ಸೂತ್ರವ್ಯಾಖ್ಯಾನ, ಪೂರ್ವ ಮೀಮಾಂಸಾದೀಪಿಕೆ – ಮುಂತಾದ ಗ್ರಂಥಗಳನ್ನು ಈತ ರಚಿಸಿದನೆಂದು ಹೇಳುತ್ತಾರೆ. ಆದರೆ ಈತನಿಗೆ ಕೀರ್ತಿತಂದ ಗ್ರಂಥ ಶ್ರೀಕೃಷ್ಣಲೀಲಾತರಂಗಿಣಿ- ಎಂಬುದು ನಿರ್ವಿವಾದ. ಈ ಸಂಸ್ಕೃತ ರಚನೆಯನ್ನು ಕಾವ್ಯವೆನ್ನಬೇಕೇ? ಸಂಗೀತ

ವಿದ್ವಾನ್ ಬಿ. ಸಿ. ಗುಂಡೂರಾವ್

ರೂಪಕವೆನ್ನಬೇಕೆ? ಗೇಯನಾಟಕವೆನ್ನಬೇಕೇ? ಎಂಬ ಬಗ್ಗೆ ಸಾಹಿತ್ಯ ವಿಮರ್ಶಕರಲ್ಲಿ ಮಾತ್ರ ಭೇದ ಕಂಡು ಬರುತ್ತದೆ. ಯಾರು ಏನೇ ಹೆಸರಿಡಲಿ ಶ್ರೀಕೃಷ್ಣಲೀಲಾತರಂಗಿಣಿ ರಸಿಕಜನ ಕಲ್ಪವೃಕ್ಷ. ಸಂಗೀತ ಪ್ರಿಯರ ಸುರಧೇನು. ನರ್ತನ ಪಟುಗಳ ನಿಧಿ.

ಹನ್ನೆರಡು ಸ್ಕಂಧಗಳಲ್ಲಿ ಭಾಗವತವಿರುವಂತೆ, ಇಲ್ಲಿ ಕೃಷ್ಣ ಚರಿತೆ ಹನ್ನೆರಡು ತರಂಗಿಣಿಗಳಲ್ಲಿದೆ. ಕಮನೀಯ ಬಾಲ ಗೋಪಾಲನ ರಮಣೀಯ ಕಥಾಸಾಗರದ ಲೀಲಾಲೋಲ ವೀಚಿವಿಲಾಸದಂತೆ ಈ ಗ್ರಂಥ ಅತ್ಯಂತ ಮಧುರವಾಗಿದೆ. ಲಾಲಿತ್ಯ ಹಾಗೂ ಸೌಂದರ್ಯದ ದೃಷ್ಟಿಯಿಂದ - ಗೀತ ಗೋವಿಂದವನ್ನು ಪ್ರಥಮವೆನ್ನುವುದಾದರೆ ಈ ರಚನೆಗೆಯನ್ನು ದ್ವಿತೀಯವೆಂದರೆ ತಪ್ಪೇನೂ ಆಗಲಾರದು. ಜಯದೇವನ ಪ್ರಭಾವ ಈ ರಚನೆಯಲ್ಲಿ ಕಂಡುಬರುವುದಿಲ್ಲವೆಂದು ಧೈರ್ಯವಾಗಿ ಹೇಳಲಾಗುವುದಿಲ್ಲವಾದರೂ ನಾರಾಯಣ ತೀರ್ಥನ ಭಕ್ತಿಯ ಸ್ವಂತಿಕೆ ಆಮೂಲಾಗ್ರವಾಗಿ ಕಂಡುಬರುತ್ತದೆ. ಇದರಲ್ಲಿ ಗದ್ಯವಿದೆ, ಶ್ಲೋಕಗಳಿವೆ, ವಿವಿಧ ರಾಗರಾಗಿಣಿಗಳಲ್ಲಿ ಹಾಡಬಹುದಾದ ಮಧುರಾತಿ ಮಧುರ ಗೇಯಕವಿತೆಗಳಿವೆ; ಭರತನಾಟ್ಯಕ್ಕೆ ಹೊಂದುವ ಜತಿಗಳಿವೆ; ಮಧ್ಯೆಮಧ್ಯೆ "ದರುವು" ಎಂಬ ಹೆಸರಿನಿಂದ ಪ್ರಸಿದ್ಧವಾಗಿರುವ ಒಂದು ವಿಶಿಷ್ಟ ಜಾತಿಯ ಸಂಗೀತ ಪ್ರಭೇದವನ್ನೂ ಕವಿ ಬಳಸಿದ್ದಾನೆ. ಎಲ್ಲದರಲ್ಲೂ ಲಾಲಿತ್ಯವಿದೆ, ಪ್ರಾವೀಣ್ಯವಿದೆ, ರಸಿಕತೆ ಇದೆ, ಮಾಧುರ್ಯವಿದೆ, ಕೋಮಲತೆ ಇದೆ– ಮುಟ್ಟಿದರೆ ಮಾಸಿಹೋದೀತೇನೊ– ಎಂಬಂತಹ ಸೊಗಸಿದೆ. ವೀಣಾವೇಣು ಮೃದಂಗಾದಿ ವಾದ್ಯ ಸಮ್ಮೇಳನದೊಂದಿಗೆ– ತರಂಗಿಣಿಯ ಕವಿತೆಗಳನ್ನು ಹಾಡುತ್ತ – ನಾಟಕದಂತೆ – ಅಭಿನಯಿಸಿದಾಗಲಂತೂ – ಚೇತೋಹಾರಿ ಪರಿಣಾಮ ಬೀರುತ್ತದೆಂಬುದರಲ್ಲಿ ಸಂದೇಹವಿಲ್ಲ. ಪ್ರೇಕ್ಷಕರನ್ನು ನಂದ ನಂದನನ ಲೀಲಾವಿನೋದಗಳಲ್ಲಿ ಲೀನಗೊಳಿಸುವಂತಹ ಶಕ್ತಿ ತರಂಗಿಣಿಯ ಪ್ರತಿಕವಿತೆಯಲ್ಲೂ, ಪ್ರತಿ ಮಾತಿನಲ್ಲೂ ತುಂಬಿದೆ. ಭಾಗವತ ದಶಮ ಸ್ಕಂಧ ಪೂರ್ವಾರ್ಧದ ಸಮಸ್ತ ಸೌಂದರ್ಯವನ್ನೂ ಇಲ್ಲಿ ಭಟ್ಟಿಇಳಿಸಲಾಗಿದೆ. ಕೃಷ್ಣ ಜನನದಿಂದ ಹಿಡಿದು ರುಕ್ಮಿಣಿ ಕಲ್ಯಾಣದವರೆಗಿನ ಕಥೆ ಇಲ್ಲಿ ಪ್ರಮುಖ ವಸ್ತು. ರಾಸಕ್ರೀಡೆಯನ್ನಂತೂ ಭರತನಾಟ್ಯಕ್ಕೆ ಹೊಂದಾಣಿಕೆಯಾಗುವಂತೆ ರಚಿಸಿದ್ದಾನೆ. ತನ್ನ ಗೇಯ ಕವಿತೆಗಳಿಗೆ ರಾಗ ತಾಳಗಳನ್ನು ಸೂಚಿಸಿರುವ ಈ ಕವಿ ಸಂಗೀತದಲ್ಲಿ ಅದ್ವಿತೀಯ ಪಂಡಿತನಿರಬೇಕು. ರಸಾನುಕೂಲ ಹಾಗೂ ಭಾವಾನುಗುಣ ಕೋಮಲ ಪದ ಪ್ರಯೋಗದಲ್ಲಂತೂ ನಾರಾಯಣತೀರ್ಥ ಸಿದ್ಧಹಸ್ತ. ಸಂಸ್ಕೃತ ಭಾಷೆ ಈ ರಸಸಿದ್ಧ ಕವೀಶ್ವರನಕೈಗೆ ಸಿಕ್ಕಿ ನಕ್ಕುನಲಿದಿದೆ–ನಲಿದು ನರ್ತಿಸಿದೆ. ಗೋಕುಲ ಬೃಂದಾವನಗಳಲ್ಲಿ, ಸರಯೂ ಯಮುನಾತೀರದ ಕದಂಬವನಗಳಲ್ಲಿ– ಲತಾಕುಂಜಗಳಲ್ಲಿ; ಶಾರದ ಚಂದ್ರಿಕಾಸ್ನಾತ ವಿಶಾಲ ಪುಳಿನ ಪ್ರದೇಶಗಳಲ್ಲಿ ಲೀಲಾವತಾರಿ ಕೃಷ್ಣ ನಡೆಸಿದ ವಿವಿಧ ಲೀಲಾವಿನೋದಗಳನ್ನು ಈ ಋಷಿಕವಿ, ತನ್ನ ಯೋಗದೃಷ್ಟಿಯಿಂದ ಕಂಡಿರಬೇಕು. ಆ ಭವ್ಯಮಹಿಮೆಗಳನ್ನು - ದಿವ್ಯಕ್ರೀಡೆಗಳನ್ನು ಕಂಡು ಕವಿಹೃದಯ ಆನಂದಭರಿತವಾದಾಗ ತುಳುಕಿದ ಪರಮಾನಂದ ಬಿಂದು ಸಂದೋಹವೇ ಶ್ರೀಕೃಷ್ಣ ಲೀಲಾತರಂಗಿಣಿ. ಬ್ರಹ್ಮವಸ್ತುವನ್ನು ಕೃತಿಗಳು "ರಸೋ ವೈ ಸಃ" ಎಂದು ಘೋಷಿಸಿವೆ. ರಸಕೆ ರಸರೂಪಿಯಾದ–ರಸಾನಾಂ ರಸತಮಃ-ಆದ ಕೃಷ್ಣನನ್ನು ನಾರಾಯಣ ತೀರ್ಥ ತನ್ನ ವಾಕ್ಯ ಮಾಣಿಕ್ಯ, ಗೀತ ರತ್ನಗಳಿಂದಲಂಕರಿಸಿ, ಆ ಪುಣ್ಯ ಮಂಗಳರೂಪ ಕಂಡು ಚರಿತಾರ್ಥನಾಗಿದ್ದಾನೆ.

ಸೌರಾಷ್ಟ್ರ – ಮುಖಾರಿ – ನಾಟಿ – ನಾದನಾಮಕ್ರಿಯ– ಶಂಕರಾಭರಣ, ಪಂತುವರಾಳಿ-ನೀಲಾಂಬರಿ-ಕರ್ನಾಟಸಾರಂಗ- ಕಾಂಭೋಜಿ – ಭೈರವಿ – ಕಲ್ಯಾಣಿ–ಕೇದಾರಗೌಳ – ಮಧ್ಯಮಾವತಿ–ಮೋಹನ–ದ್ವಿಜಾವಂತಿ–ಯದುಕುಲ ಕಾಂಭೋದಿ ಸುರುಟಿ–ಸಾವೇರಿ–ಪುನ್ನಾಗವರಾಳಿ– ಇತ್ಯಾದಿ ವಿವಿಧ ರಾಗಗಳನ್ನು ತನ್ನ ಗೀತನಾಟಕದಲ್ಲಿ ನಾರಾಯಣತೀರ್ಥ ಬಳಸಿದ್ದಾನೆ. ಸಂಗೀತ ಸಾಹಿತ್ಯ ಎರಡೂ ಕ್ಷೇತ್ರಗಳಲ್ಲಿ



# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

## ಮಂಗಾಪುರ.

ಶ್ರೀ ವೆಂಕಟೇಶ್ವರಸ್ವಾಮಿ ಪದ್ಮಾವತಿಯನ್ನು ವಿವಾಹವಾದ ಬಳಿಕ ತಿರುಮಲೆಗೆ ಆಗಮಿಸುವ ಮುನ್ನ ಆರುತಿಂಗಳಕಾಲ ತಂಗಿದ್ದ ಸ್ಥಳ. ತಿರುಮಲೆಯಲ್ಲಿನ ಧ್ರುವಮೂರ್ತಿಗಿಂತ 2 ಅಡಿ ಹೆಚ್ಚು ಎತ್ತರದ ಧ್ರುವಮೂರ್ತಿ ಇಲ್ಲಿದ್ದು, ಈ ಗುಡಿಯನ್ನು ಹಾದು ತಿರುಮಲೆಗೆ ಮೆಟ್ಟಿಲ ಮೂಲಕ ಏರಬಹುದು. ತಿರುಪತಿ-ಮದನಪಲ್ಲಿ ರಸ್ತೆಯಲ್ಲಿ ತಿರುಪತಿಯಿಂದ ಆರು ಮೈಲಿದೂರದ ಶ್ರೀನಿವಾಸ ಮಂಗಾಪುರಕ್ಕೆ ಚಂದ್ರಗಿರಿ ಹಾಗೂ ತಿರುಪತಿಗಳಿಂದ ಬಸ್ ಸೌಕರ್ಯವಿದೆ.

### ದರ್ಶನ ಹಾಗೂ ಸೇವಾ ವಿವರಗಳು

| | ಭಾನು, ಸೋಮ, ಮಂಗಳ, ಬುಧ, ಗುರು ಹಾಗೂ ಶನಿವಾರಗಳ ಕಾರ್ಯಕ್ರಮ. | | | ಶುಕ್ರವಾರಗಳಲ್ಲಿ | |
|---|---|---|---|---|---|
| ಸುಪ್ರಭಾತ | ಪ್ರಾ 5–00 | ಪ್ರಾ 5–30 | | ಪ್ರಾ 5–00 | ಪ್ರಾ 5–30 |
| ವಿಶ್ವರೂಪ ಸರ್ವದರ್ಶನ | ಪ್ರಾ 5–30 | ಪ್ರಾ 6–00 | | ಪ್ರಾ 5–30 | ಪ್ರಾ 6–00 |
| ತೋಮಾಲ, ಕೊಲುವು ಪಂಚಾಂಗಶ್ರವಣ | ಪ್ರಾ 6–00 | ಪ್ರಾ 6–30 | | ಪ್ರಾ 6–00 | ಪ್ರಾ 6–30 |
| ಸಹಸ್ರನಾಮಾರ್ಚನೆ | ಪ್ರಾ 6–30 | ಪ್ರಾ 7–00 | | ಪ್ರಾ 6–30 | ಪ್ರಾ 7–00 |
| ಮೊದಲನೇ ಗಂಟೆ | ಪ್ರಾ 7–00 | ಪ್ರಾ 7–30 | | ಪ್ರಾ 7–00 | ಪ್ರಾ 7–30 |
| ಸರ್ವದರ್ಶನ | ಪ್ರಾ 7–30 | ಪ್ರಾ 10–00 | *ಅಭಿಷೇಕ | ಪ್ರಾ 7–30 | ಪ್ರಾ 8–30 |
| | | | ಸಮರ್ಪಣ | ಪ್ರಾ 8–30 | ಪ್ರಾ 9–30 |
| 2ನೇ ಅರ್ಚನೆ | | | | | |
| 2ನೇ ಗಂಟೆ | ಪ್ರಾ 10–00 | ಪ್ರಾ 10–30 | | ಪ್ರಾ 9–30 | ಪ್ರಾ 10–30 |
| *ಅರ್ಚಿತ ಕಲ್ಯಾಣೋತ್ಸವ | | | | ಪ್ರಾ 10–30 | ಮ 12–00 |
| ಸರ್ವದರ್ಶನ | ಪ್ರಾ 10–30 | ಸಂ 6–30 | | ಪ್ರಾ 10–30 | ಸಂ 6–30 |
| ರಾತ್ರಿ ಕೈಂಕರ್ಯ | | | | | |
| ರಾತ್ರಿ ಗಂಟೆ | ಸಂ 6–30 | ರಾ 7–00 | | ಸಂ 6–30 | ರಾ 7–00 |
| ಸರ್ವದರ್ಶನ | ರಾ 7–00 | ರಾ 8–45 | | ರಾ 7–00 | ರಾ 8–45 |
| ಏಕಾಂತ ಸೇವೆ | ರಾ 8–45 | ರಾ 9–00 | | ರಾ 8–45 | ರಾ 9–00 |

| | |
|---|---|
| *ಅರ್ಚಿತ ಕಲ್ಯಾಣೋತ್ಸವ ಶುಲ್ಕ | ರೂ – 150=00 |
| *ಅಭಿಷೇಕ (ಶುಕ್ರವಾರಗಳಲ್ಲಿ) ಶುಲ್ಕ | ರೂ – 100=00 |
| ಅರ್ಚನೆ | ರೂ – 3=00 |
| ಆರತಿ | ರೂ – 1=00 |
| ತೆಂಗಿನಕಾಯಿ ವರ್ತನೆ | ರೂ – 0=50 |
| ಅಭಿಷೇಕಾನಂತರ ದರ್ಶನ | ರೂ – 3=00 |

ಸಂಪೂರ್ಣ ಪಾಂಡಿತ್ಯವಿದ್ದ ಈ ಯೋಗಿಕವಿಯ ಗ್ರಂಥದ ಕೆಲ ಸನ್ನಿವೇಶಗಳ ಸ್ವಾರಸ್ಯವನ್ನು ಪ್ರಸ್ತಾವನೆ ಮಾಡುವುದು ಅಪ್ರಾಸಂಗಿಕವಾಗಲಾರದು.

ಕಾವ್ಯದ ಪ್ರಾರಂಭದಲ್ಲಿ ಗಣೇಶ – ಗರುಡ – ಪ್ರಹ್ಲಾದ ನಾರದಾದಿ ಭಾಗವತೋತ್ತಮರು – ಜಗನ್ನಾಥಸ್ವಾಮಿ – ಮುಂತಾದ ವಿವಿಧ ಭಾಗವತ್ ಸ್ವರೂಪಗಳನ್ನು ಸ್ತೋತ್ರ ಮಾಡಿದ್ದಾನೆ. ಪ್ರತಿತರಂಗಿಣಿಯ ಪ್ರಾರಂಭದಲ್ಲಿ – ಅದಕ್ಕೆ ಸಂಬಂಧಿಸಿದ ಕಥಾಭಾಗದ ಪರಿಚಯವಿದೆ. ಕವಿ ತನ್ನ ಇಷ್ಟ ದೇವತೆಯನ್ನು–ತಾಪಹರ, ನಾರಾಯಣತೀರ್ಥ ಸಂತಾಪ ಹರ – ಎಂದು ಬೇಡಿಕೊಂಡು – ಗ್ರಂಥರಚನೆ ಪ್ರಾರಂಭಿಸಿದ್ದಾನೆ.

ದೇವಕಿಯ ವಿವಾಹ ಸಮಾರಂಭದ ವೈಭವದಲ್ಲಿ ಓಲಾಡುತ್ತಿದ್ದ ಕಂಸ – ನೂತನ ವಧೂವರರನ್ನು ವೈಭವಾಲಂಕೃತ ಸುವರ್ಣ ರಥದಲ್ಲಿ ಕರೆದುಕೊಂಡುಹೋಗುವ ಸನ್ನಿವೇಶದಿಂದ ಗ್ರಂಥ ಪ್ರಾರಂಭವಾಗುತ್ತದೆ. ಭೂದೇವಿ ಬ್ರಹ್ಮಾದಿ ದೇವತೆಗಳು, ನಾರದಾದಿ ಮಹರ್ಷಿಗಳು ಎಲ್ಲರೂ ಕೂಡಿ ಭಗವಂತನನ್ನು ಪ್ರಾರ್ಥಿಸುತ್ತ – ಧರ್ಮಸಂಸ್ಥಾಪನೆಗಾಗಿ ಅವತರಿಸುವ ಕೃಪೆ ಮಾಡಬೇಕೆಂದು ಬೇಡಿಕೊಳ್ಳುವ ಸನ್ನಿವೇಶ–

ಶರಣಂ ಭವ ಕರುಣಾಮಯ ಕುರು ದೀನದಯಾಳೋ
ಕರುಣಾರಸ ವರುಣಾಲಯ ಕರಿರಾಜ ಕೃಪಾಳೋ ॥
ಘೃಣಿಮಂಡಲ ಮಣಿಕುಂಡಲ ಫಣಿಮಂಡಲ ಶಯನ
ವಿನತಾಸುತ ಘನವಾಹನ ಮುನಿಮಾನಸ ಭವನ ॥

ಆರ್ತ ಭಕ್ತರ ಈ ಪ್ರಾರ್ಥನೆ ಮನ್ನಿಸಿ ಭಗವಂತ ಅವರಿಗೆ ಆಶ್ವಾಸನೆ ನೀಡುತ್ತಾನೆ — "ಅವತೀರ್ಯ ಯದೋರ್ವಂಶೇ ಕರಿಷ್ಯಾಮಿ ಹಿತಂ ತವ" ಪರಾತ್ಪರನಾದ ಭಗವಂತ ಅವತರಿಸಿದಾಗ–ಆ ಭವ್ಯತೇಜೋಮೂರ್ತಿಯನ್ನು ಕಂಡು ಬೆರಗಾದ ದೇವಕೀವಸುದೇವರು–ಸ್ವಾಮಿ–ಈ ಬೃಹದ್ರೂಪವನ್ನುಪಸಂಹರಿಸಿ–ಪುಟ್ಟಕಂದಮ್ಮನಾಗಿ ನಮ್ಮ ಕೈಗೆ ಬಾ–ಎಂದು ಬೇಡಿಕೊಂಡರಂತೆ–

ಸ್ವಾಮಿನ್ ಮಾನುಷ ಬಾಲಭಾವ ಮಧುನಾ
ಸಂದರ್ಶಯಸ್ಮಾನ್ ಪ್ರತಿ ॥

ಅಷ್ಟೇ ಅಲ್ಲ—

ರಕ್ಷ ರಕ್ಷ ಅಸುರಶಿಕ್ಷ । ರಾಜೀವದಳಾಯತಾಕ್ಷ
ಅಕ್ಷೀಣ ಕೃಪಾಕಟಾಕ್ಷ । ಆಶ್ರಿತ ಪಕ್ಷಸಂರಕ್ಷ
ಸರ್ವಮನೋರಥಾಧ್ಯಕ್ಷ । ಸಕಲಲೋಕಾವನದಕ್ಷ
ಪತಿತಜನ ಪಾವನ । ಪತಗಪತಿವಾಹನ–ರಕ್ಷ ರಕ್ಷ

ಎಂದು ಪ್ರಾರ್ಥಿಸಿದಾಗ, ದೇವಕೀ ಭಾಗದೇಯನೂ, ಭವ ಭಯ ತಿಮಿರಾರಿಯೂ ಆದ ಶ್ರೀಹರಿ–ಪರಮ ಕರುಣೆಯಿಂದ–ಪುಟ್ಟಮಗುವಾಗಿ–ಮುದ್ದಿನ ಮುದ್ದೆಯಾಗಿ–ರೂಪು ಪಡೆದಾಗ ಆ ತಂದೆತಾಯಿಗಳ ಹಿಗ್ಗು ಹೇಳತೀರದು!! ನನ್ನನ್ನು ನಂದಗೋಕುಲದಲ್ಲಿರಿಸಿ ಬನ್ನಿ–ಅಲ್ಲಿರುವ ನನ್ನ ಯೋಗ ಮಾಯೆಯನ್ನಿಲ್ಲಿಗೆ ತನ್ನಿ ಮತ್ತು – ಮದಾಜ್ಞಯಾ

ಯಮುನೆಯೂ ದತ್ತಮಾರ್ಗೇಣ ಮಾಂ ನಯ– ಸನ್ನಾಜ್ಞೆ ಯಂತೆ ಯಮುನಾನದಿ ದಾರಿಬಿಡುತ್ತದೆ– ಆ ದಾರಿಯಲ್ಲಿ ನನ್ನನ್ನು ಗೋಕುಲಕ್ಕೆ ಕರೆದೊಯ್ಯಬೇಕು– ಎಂದು ಸೂಚಿಸಿದ ನಂತೆ ಪರಮಾತ್ಮ. ಹರಿವ ಯಮುನೆ ಹರಿಗಲ್ಲದೆ ಬೇರೆ ಯಾವರಿಗೆ ದಾರಿ ಬಿಟ್ಟಾಳೇನು! ಕೇವಲ ತನ್ನಿಚ್ಛೆಯಂತೆ ಮಾನವಾಕಾರ ತಾಳಿದ ಈ ಮಗು, ಕವಿಯ ದೃಷ್ಟಿಯಲ್ಲಿ ಪರಬ್ರಹ್ಮ ವಸ್ತುವಾಗಿದೆ.

ನಂದಗೋಕುಲದಲ್ಲಿ ಕೃಷ್ಣ ಎಲ್ಲರ ಕಣ್ಮಣಿಯಾಗಿ, ಅಕ್ಕರೆಯ ಸಕ್ಕರೆ ಬೊಂಬೆಯಾಗಿ, – ಯಶೋದೆಗಂತೂ ಪುಣ್ಯವಿಶೇಷವಾಗಿ ಬೆಳೆಯುತ್ತಾನೆ.

ಕೃಷ್ಣನನ್ನು ತೊಟ್ಟಿಲಲ್ಲಿ ಹಾಕಿ ತೂಗುವ ಭಾಗ್ಯ ಎಲ್ಲಿ ಪಡೆದಳೋ ಯಶೋದೆ!! ಈ ಸನ್ನಿವೇಶದಲ್ಲಿ ಯೋಗಿ ಕವಿಯ ಮಧುರ ಕಂಠ ನುಡಿದಿರುವ ಜೋಗುಳ ಹೀಗಿದೆ—

ಸಕಲ ಲೋಕಾಧಾರ ಸಚ್ಚಿದಾಕಾರ
ಪ್ರಕಟಿತಾಗಮಜಾಲ ಪದ್ಮಾವಿಲೋಲ ॥
ವಿಕಚ ವಾರಿಜನೇತ್ರ, ವಿಸ್ಫುರದ್ಗಾತ್ರ
ಶಕಲಿತಾಸುರಜಾಲ ಶಾಂತ್ಯೈಕಮೂಲ ॥
ಮಕರಧ್ವಜಾಕಾರ ಮಂಜುಳಹಾರ
ಕಲಿತ ಕೌಸ್ತುಭಶೋಭಕಾಲಮೇಘಾಭಾ ॥
ಮದನಗೋಪಾಲ ಸನ್ಮಾನಿತಾಶೀಲ
ಬಲಭದ್ರ ಕೃತಖೇಲ ಬಾಲಗೋಪಾಲ ॥

ಈ ಗೀತನಾಟಕದಲ್ಲಿ ಕೃಷ್ಣಗೋಪೀಸಮಾಗಮ – ಅತ್ಯಂತ ರಮಣೀಯಭಾಗ. ಶರದೃತು ಬಂದಿದೆ. ಶಾ ರ ದೇ ವ ಶರದಾಗತಾ ಸ್ವಯಂ ತಾರಕೋದಯ ವಿಶೇಷಭಾಸುರಾ— ಎಂದಿದ್ದಾನೆ ಕವಿ. ಸಮಸ್ತ ಸೃಷ್ಟಿಯೇ ಶರತ್ ಕೌಮುದಿ ಯಲ್ಲಿ ಮಿಂದು ನಲಿಯುತ್ತಿದೆ. ಸಂತತಾನಂತ ಕಲ್ಯಾಣ ಗುಣಗಣ ನವರತ್ನ ರತ್ನಾಕರನಾದ, ಭುವನಸುಂದರ ಕೃಷ್ಣ, ಸುಮಧುರ ಸಮುದ್ಘೋಷ ಮಂದಗಮನೋಲ್ಲಾಸ ವಿವಿಧ ವಿಲಾಸ ಬಹುತರ ಕಲ್ಲೋಲ ಜಾಲದಂತೆ, ವೇಣುಗಾನ ಮಾಡುತ್ತಿದ್ದಾನೆ. ತರಂಗ ತರಂಗವಾಗಿ ನಾದವಾಹಿನಿ ಪ್ರವಹಿಸುತ್ತಿದೆ. ಮಂದಾರ ಮೂಲೇ ಮದನಾಭಿರಾಮಂ ಬಿಂಬಾಧರಾಪೂರಿತ ವೇಣುನಾದಂ। ಗೋ ಗೋಪ ಗೋಪೀ ಜನಮಧ್ಯ ಸಂಸ್ಥಂ ಗೋಪಂ ಭಜೇ ಗೋಕುಲ ಪೂರ್ಣ ಚಂದ್ರಂ— ಎಂದು ಯಾರ ಶ್ರೀಚರಣಗಳಲ್ಲಿ ಕವಿಲೀಲಾ ಶುಕ, ತನ್ನ ವಿನಮ್ರ ಪ್ರಣಾಮಗಳನ್ನು ಸಮರ್ಪಿಸಿದ್ದಾನೋ ಆ ಪರಮ ಪುರುಷನನ್ನು ದರ್ಶಿಸುವ ತವಕದಿಂದ, ಗೋಪಿಯರು ಗುಂಪು ಗುಂಪಾಗಿ ಬರುತ್ತಿದ್ದಾರೆ. ಕವಿ ನಾರಾಯಣ ತೀರ್ಥ, ಈ ಸನ್ನಿವೇಶ ಬರೆಯುವಾಗ, ರಸೋನ್ಮಾದದಿಂದ ಮೈಮರೆತು ಹೋಗಿದ್ದಾನೆ, ಶೃಂಗಾರ ಶೀಲನೂ, ಸಂಗೀತ ಲೋಲನೂ, ಆದ ಕೃಷ್ಣನ ಮನ ಮೋಹಕ ವರ್ಣನೆ ಮಾಡುತ್ತ ಬಹುಶಃ ಒಂದು ಶಬ್ದ ಚಿತ್ರ ವನ್ನೇ ಅಂಕಿತಗೊಳಿಸಿದ್ದಾನೆ—

ಸುರುಚಿರಹಾಸಂ। ಸುಂದರನಾಸಂ
ತರುಣಾರುಣ ಕಿರಣಾಧರ ಸರಸಂ ॥
ನಂದ ಕುಮಾರಂ ನಗವರ ಧೀರಂ
ಬೃಂದಾವನ ಭುವಿ ವಿವಿಧ ವಿಹಾರಂ ॥
ಭಾವುಕ ಚರಣಂ ಭವ ಸಂತರಣಂ
ಭವ್ಯಸೇವಕ ಜನ ಭಾಗ್ಯವಿತರಣಂ ॥

–ಆದಸ್ವಾಮಿ, ಗೋಪಕನ್ಯೆಯರ ಮಧ್ಯೆ ಇಂದ್ರ ನೀಲಮಣಿ ವಿಗ್ರಹದಂತೆ ನಿಂತಿದ್ದಾನೆ. ಗೋಪಲಲನಾಮಣಿಯರು, ಗೋಪಾಲ ಚೂಡಾಮಣಿ... ಸಮಸ್ತ ಬೃಂದಾವನವೇ ಮಣಿ ಗಣಾಲಂಕೃತವಾಗಿ ಸಂಭ್ರಮದಿಂದ ನಿಂತಂತೆ ಕಾಣುತ್ತದೆ. ಸಂಧ್ಯಾಸಮಯ – ಸುಂದರ ಸೈಕತಪ್ರದೇಶ – ಕುಲುಕುಲು ನಗುತ್ತ ಅರಳಿನಿಂತಿರುವ ಲಕ್ಷಲಕ್ಷ ಹೂಗಳು – ಹಾಸಿ ಬೀಸಿರುವ ಶುಭ್ರಜ್ಯೋತ್ಸ್ನೆ – ತರಂಗ ಮಂಗಳೆಯಾಗಿ ಹರಿಯುತ್ತಿರುವ ಯಮುನೆ – ಮಂದಾರ ವೃಕ್ಷಗಳ ಮೇಲೆ ಪಕ್ಷಿ ಪರಿವತ್ತು... ಭಾವ ಸೌಂದರ್ಯದೊಂದಿಗೆ ಭಾಷಾ ಲಾಲಿತ್ಯವನ್ನು ಕವಿ ಹೇಗೆ ಬೆರೆಸಿಕೊಂಡಿದ್ದಾನೆಂಬುದಕ್ಕೆ ಈ ಉದಾಹರಣೆಯನ್ನು ರಸಿಕ ಪಾಠಕರು ಪರಾಂಬರಿಸಬಹುದು–

ತತ್ರಖಿಲು ಬೃಂದಾವನೇ ಮಂದಾರ ಪಾರಿಜಾತ
ಸಂತಾನ ಕಲ್ಪಕ
ಹರಿಚಂದನಾದಿ ತರುಬೃಂದಾನಂದಿತ
ಶುಕಪಿಕಸಾರಿಕಾಬೃಂದ
ವಿನಿಂದಿತ ನಂದನೋದ್ಯಾನೇ। ಸಮುತ್ಫುಲ್ಲ
ಶಾರದ ಮಲ್ಲಿಕಾದಿ
ಮಕರಂದ ಪರಿಮಳ ಲಾಲಸತಯಾ
ಸಂಚರಚ್ಚಂಚರೀಕ
ಝಣ ಝಣಾತ್ಕಾರ ನೂಪುರ ರವೈಃ।
ವಿಚಿತ್ರಪತತ್ರಿ
ವಕ್ತ್ರೋದ್ಗಳಿತ ನಾನಾವಿಧ ವಿನೋದ
ನಿನಾದ ತಾಳ ಮೃದಂಗ
ಸಂಗೀತಾದಿ ಕಲಾವಿಶೇಷೈಃ। ಕಳಿಂದನಂದಿನೀ ಪುಳಿಂದ
ಸಮುಲ್ಲಸಿತ ಲವಂಗಲತಾದಿ ವಿವಿಧ ಲತಾಭವನೇ।
ಭಕ್ತ ಸಂಕಲ್ಪ ಸಿದ್ಧಿಮಾತನ್ವಾನೋ ಗೋಪರಮಣೀ
ನಯನೋತ್ಪಲಾರಾಧಿತ
ಮದನಗೋಪಾಲಮೂರ್ತಿರ್ವಾಸುದೇವೋ
ಗೋಪೀಭಿಸ್ಸಹ ರಾಸಕ್ರೀಡಾ
ಮಹೋತ್ಸವಾರಂಭ ಸಂಭ್ರಮಚೇತಾಃ ಇದಮಾಹ...

ರಾಸಕ್ರೀಡಾರತರಾದ ಗೋಪಿಯರನ್ನು ಕೃಷ್ಣಾತ್ಮತತ್ತ್ವಜ್ಞಾಃ ಕೃಷ್ಣಬ್ರಹ್ಮಾತ್ಮನ ಸ್ಥಿತಾಃ-ಎಂದೆಲ್ಲ ಕರೆದಿರುವ ಯೋಗಿಕವಿ ಪರಮಾತ್ಮ ಜೀವಾತ್ಮ ತತ್ತ್ವವನ್ನು ನಿರೂಪಿಸಲು ಈ ಸನ್ನಿವೇಶವನ್ನುಪಯೋಗಿಸಿಕೊಂಡಿದ್ದಾನೆ. ಯಾದವ ಕೃಷ್ಣ ಯದುಕುಲ ಕೃಷ್ಣ ಮಾಧವ ಮಾಮವದೇವ ಎಂದು ಗೋಪಕನ್ಯೆಯರು ಪ್ರಾರ್ಥಿಸುತ್ತಾರೆ. ಸಾನಂದಮಾಲೋಕೆ ಯಾಮೋಮುಕುಂದಂ ಎಂದು ಹಿಗ್ಗುತ್ತಾರೆ. ಕೃಷ್ಣನಿಗೆ ಕವಿ ತೊಡಿಸಿರುವ ವಿಶೇಷ ವಿಶೇಷಣ ರತ್ನಾಭರಣಗಳು ಈ ರೀತಿ ಇವೆ—

ಗೋಪಿಕಾಗಣನಯನ ಕುಮುದ ಪೂರ್ಣೇಂದು ;
ಆಲೋಲಮಕರ ಕುಂಡಲನಟನದಕ್ಷ
ವಲ್ಲವೀಮಾಣಿಕ್ಯ ಮಣಿಯುಗಳ ಖೇಲ,
ಅಖಿಲಲೋಕಾಧಾರ ಅಧಿಕತರಲೀಲ
ಸಂಗೀತ ರಸವಿಜ್ಞ, ಅಖಿಲಸಾರಜ್ಞ... ಇತ್ಯಾದಿ.

ದ್ವಾದಶತರಂಗದಲ್ಲಿ ರುಕ್ಮಿಣೀಕಲ್ಯಾಣ ಮನೋಹರವಾಗಿ ಬಣ್ಣಿಸಲಾಗಿದೆ. ಸಿದ್ಧಜನವಿನುತ ಪ್ರಸಿದ್ಧತರ ಶೀಲನೂ, ಬೃಂದಾವನಾಂತ ಭುವಿ ವಿಶ್ರುತವಿಹಾರನೂ ಆದ ಕೃಷ್ಣನನ್ನು ಎಂದೆಂದಿಗೆ ಕಂಡೇನೋ–ಎಂದು ಕನ್ಯಾಮಣಿ ರುಕ್ಮಿಣಿ ಪರಿತಪಿಸುತ್ತಿದ್ದಾಳೆ. ಆಕೆಯ ದೃಷ್ಟಿಯಲ್ಲಿ ಕೃಷ್ಣನೆಂದರೆ– ಸರ್ವಲೋಕ ಕಾರಣ – ಯಾದವಾಬ್ಧಿ ಚಂದ್ರ – ಭಕ್ತಾನುಗ್ರಹಾಭಿವ್ಯಕ್ತಭವ್ಯಮೂರ್ತಿ – ಘೋ ರ ಸಂ ಸಾ ರ ಕಾರಣವಾರಣ ಕೇಸರಿ!! ಆರ್ತಜನ ಸಂರಕ್ಷಕನಾದ ಕೃಷ್ಣನಲ್ಲಿ ಆಕೆಯದೊಂದೇ ಪ್ರಾರ್ಥನೆ—

ತ್ವತ್ ಪ್ರಸಾದಂ ಕಾಂಕ್ಷೇ ನಾನ್ಯಂತು ಕಾಮಯೇ
ತ್ವತ್ ಪಾದಕಮಲೇ ಭ್ರಮರೀಭವತು ಮನ್ಮಾನಸಂ ॥

(24 ನೇ ಪುಟ ನೋಡಿ)

ಬಾಲಮುಕುಂದ, ಗೋಕುಲದ ಬೀದಿ ಬೀದಿಗಳಲ್ಲಿ ಓಡಾಡುವಾಗ, ಅವನನ್ನು ಕಂಡು ಗೋಪ ಕನ್ಯೆಯರು ಹಿಗ್ಗಿ ಹೋಗುತ್ತಾರೆ. ಸಕಲ ಶುಭಲಕ್ಷಣೋಪೇತನಾದ ಆ ತೇಜಸ್ವಿಬಾಲಕನನ್ನು ಕಂಡು ಧನ್ಯರಾಗುತ್ತಾರೆ. ಬೀದಿಯಲ್ಲಿ ಹೆಂಗಸರು ಪರಸ್ಪರ ಮಾತಾಡಿಕೊಳ್ಳುವ ಸೊಬಗು ಈ ರೀತಿ ಇದೆ—

ಕೃಷ್ಣಂ ಕಲಯಸಖೀ ॥ ಪಲ್ಲವಿ ॥
ಸುಂದರಂ – ಬಾಲಕೃಷ್ಣಂ ॥ ಅ. ಪ. ॥

ಕೃಷ್ಣಂ। ಗತವಿಷಯ ತೃಷ್ಣಂ। ಜಗತ್ ಪ್ರಭವಿಷ್ಣುಂ
ಸುರಾರಿಗಣಜಿಷ್ಣುಂ। ಸದಾ ಬಾಲಕೃಷ್ಣಂ ಕಲಯಸಖೀ ॥
ಧೀರಂ। ಭವಜಲಧಿ ಪಾರಂ। ನಿಖಿಲಾಗಮಸಾರಂ
ಸಮಸ್ತಯೋಗಿತಾರಂ। ಸದಾ ಬಾಲಕೃಷ್ಣಂ ಕಲಯಸಖೀ ॥

ರಾಧಾರುಣಾಧರ ಸುಧಾಪಂ। ಸಚ್ಚಿದಾನಂದ ರೂಪಂ
ಜಗತ್ರಯ ಭೂಪಂ। ಸದಾ ಬಾಲಕೃಷ್ಣಂ ಕಲಯಸಖೀ ॥
ಶೃಂಗಾರ ರಸಭರ। ಸಂಗೀತ ಸಾಹಿತ್ಯ
ಸಂಗಾಲಹರೀಖೇಲ ಸಂಗಂ। ಸದಾ ಬಾಲಕೃಷ್ಣಂ ಕಲಯಸಖೀ ॥

# ತಿರುಮಲೆ ತಿರುಪತಿ ದೇವಸ್ಥಾನಗಳು.

# ಶ್ರೀವೆಂಕಟೇಶ್ವರ ನಿತ್ಯ ಅನ್ನದಾನ ಯೋಜನೆ

ಅನ್ನದಾನ ಮಾಡುವುದಕ್ಕಿಂತ ಮಿಗಿಲಾದ ಪವಿತ್ರ ದಾನ ಮತ್ತೊಂದಿಲ್ಲ. ಆದರಲ್ಲೂ ಶ್ರೀ ವೆಂಕಟೇಶ್ವರಸ್ವಾಮಿಯ ಆವಾಸವಾದ ತಿರುಮಲೆಯಲ್ಲಿ ಯಾತ್ರಿಕರಿಗೆ ಅನ್ನದಾನ ಮಾಡುವುದು ಮತ್ತೂ ಪುಣ್ಯಕರವಾದದ್ದು. ತಿ. ತಿ. ದೇವಸ್ಥಾನಗಳು ತಿರುಮಲೆಯಲ್ಲಿ ಯಾತ್ರಿಕ ಭಕ್ತರಿಗೆ ಉಚಿತ ಭೋಜನ ನೀಡುವ 'ಶ್ರೀ ವೆಂಕಟೇಶ್ವರ ನಿತ್ಯ ಅನ್ನದಾನ ಯೋಜನೆ' ಯನ್ನು ಆಚರಣೆಗೆ ತಂದಿದೆ.

## ಯೋಜನೆಯ ಕಾರ್ಯರೂಪ :

* ಯಾರಾದರೂ 12.5 ಲಕ್ಷ ರೂಗಳು ಅಥವಾ ಅದರ ಗುಣಕಗಳನ್ನು ದತ್ತಿ ನೀಡಬಹುದು. ತಿ.ತಿ. ದೇವಸ್ಥಾನಗಳು ಈ ದತ್ತಿಗೆ ಸಮನಾದ ಧನವನ್ನು ಸೇರಿಸಿ, ಒಟ್ಟು ಮೊತ್ತದ ಮೇಲಣ ವಾರ್ಷಿಕ ಬಡ್ಡಿಯಿಂದ ದಿನವೊಂದಕ್ಕೆ 500 ಮಂದಿಗೆ ಉಚಿತ ಭೋಜನ ವ್ಯವಸ್ಥೆ ಮಾಡುತ್ತದೆ. ರೂ 10 ಲಕ್ಷ ನೀಡಿದಲ್ಲಿ ಇನ್ನು ಮುಂದೆ ಪ್ರತಿದಿನ 400 ಮಂದಿಗೆ ಮಾತ್ರ ಉಚಿತ ಭೋಜನ ನೀಡಲಾಗುವುದು.

* ಈಗಾಗಲೇ ರೂ 10 ಲಕ್ಷ ದತ್ತಿ ನೀಡಿರುವವರ ಹೆಸರಿನಲ್ಲಿ ಪ್ರತಿದಿನ 500 ಮಂದಿಗ ಭೋಜನ ವ್ಯವಸ್ಥೆ ಮಾಡಲಾಗುವುದು. (ಉಳಿಕೆ ಹಣ ತಿ.ತಿ.ದೇ. ನಿಧಿಯಿಂದ ಹಾಕಲಾಗುತ್ತದೆ).

* ದತ್ತಿಯನ್ನು ವ್ಯಕ್ತಿ, ಸಂಸ್ಥೆ, ಸಂಘಗಳು ನೀಡಬಹುದು.

* ಊಟದ ಕೋಣೆಯಲ್ಲಿ ದಾನಿಗಳ ಹೆಸರನ್ನು ಪ್ರಮುಖವಾಗಿರುವಂತೆ ಬರೆದಿಡಲಾಗುವುದು.

## ದಾನಿಗಳಿಗೆ ದೊರೆಯುವ ಸೌಲಭ್ಯಗಳು :

* ವರ್ಷಕ್ಕೊಮ್ಮೆ ಮೂರುದಿನಗಳ ಕಾಲ ತಿರುಮಲೆಯಲ್ಲಿ ದಾನಿಯ ಹಾಗೂ ಅವರ ಕುಟುಂಬದವರಿಗೆ ಉಚಿತ ವಸತಿ, ಹಾಗೂ ವಿರಾಮದ ವೇಳೆಯಲ್ಲಿ ದರ್ಶನ ಆರತಿಯನ್ನು ಒದಗಿಸಲಾಗುವುದು.

* ದಾನಿಗಳ ಈ ದಾನಕ್ಕೆ 80 (G) ಕಲಮಿನಂತೆ ಆದಾಯಕರ ಮಾಫಿ ಉಂಟು.

* ದಾನಿಗಳನ್ನು ಈ ಯೋಜನೆಯ ಕಾರ್ಯಾಚರಣೆಯ ಉಸ್ತುವಾರಿ ನೋಡಲು ಸಲಹಾಸಮಿತಿ ಸದಸ್ಯರನ್ನಾಗಿ ಮಾಡಿಕೊಳ್ಳಲಾಗುವುದು.

* ಈವರೆಗೆ ದತ್ತಿನೀಡಿದವರ ವಿವರಗಳು ಈ ರೀತಿ ಇವೆ.

| | | |
|---|---|---|
| 1. | ಶ್ರೀ ಎಲ್. ವಿ. ರಾಮಯ್ಯ, ಮದ್ರಾಸ್ | ರೂ 10 ಲಕ್ಷ |
| 2. | ಶ್ರೀ ಮಾನಸಿಂಗ್ ಕಾ, ಬೊಂಬಾಯಿ | ರೂ 20 ಲಕ್ಷ |
| 3. | ಶ್ರೀ ಆರ್. ಪಿ. ಗೋಯಂಕ, ಕಲ್ಕತ್ತ | ರೂ 10 ಲಕ್ಷ |
| 4. | ಶ್ರೀ ಈಶ್ವರಪ್ರಸಾದ ಪೋದ್ದಾರ್, ಕಲ್ಕತ್ತ | ರೂ 10 ಲಕ್ಷ |
| 5. | ಶ್ರೀ ಧೀರೂಭಾಯಿ ಅಂಬಾನಿ (ರಿಲಯನ್ಸ್ ಟೆಕ್ಸ್‌ಟೈಲ್ಸ್. ಬೊಂಬಾಯಿ) | ರೂ 10 ಲಕ್ಷ |

**ಇದುವರೆಗಿನ ಪ್ರತಿಕ್ರಿಯೆ ಅತ್ಯುತ್ತಮ.**

**ಯಾತ್ರಿಕರಿಗೆ ಹೆಚ್ಚಿನ ಸೇವೆ ಸಲ್ಲಿಸಲು ಉದಾರವಾಗಿ ನೀಡಿರಿ.**

ಮಿಕ್ಕ ವಿವರಗಳಿಗೆ ಕೂಡಲೇ ಬರೆಯಿರಿ :

ಕಾರ್ಯನಿರ್ವಹಣಾಧಿಕಾರಿ
ತಿ. ತಿ. ದೇವಸ್ಥಾನಗಳು
ತಿರುಪತಿ–೫೧೭೫೦೧ ಆಂ.ಪ್ರ

ಕಾರ್ಯನಿರ್ವಹಣಾಧಿಕಾರಿ

# ಶ್ರೀರಾಮಕೃಷ್ಣ ಪರಮಹಂಸರು

ಶ್ರೀ ವಿ. ಬಾಲಚಂದ್ರ ಇನಾಮದಾರ

ಶ್ರೀರಾಮಕೃಷ್ಣ ಪರಮಹಂಸರು—ಈ ಹೆಸರನ್ನು ಕೇಳದವರಾರು. ಭಾರತದ ಪ್ರತಿಯೊಬ್ಬ ಸತ್ಪ್ರಜೆಗೂ ಇವರ ದಿವ್ಯನಾಮದ ಅರಿವಿದೆ. ಇವರಲ್ಲಿ ಭಕ್ತಿ–ಗೌರವಗಳನ್ನು ತೋರುವುದು ಕೇವಲ ಹಿಂದೂಗಳೇ ಅಲ್ಲ ಸರ್ವಧರ್ಮಾನುಯಾಯಿಗಳೂ ಇವರಲ್ಲಿ ಗೌರವ ತೋರುವರು. ಕಾರಣ ಇವರು ಸಕಲ ಧರ್ಮಗಳೂ, ಮತಗಳೂ ಸತ್ಯದೇಗುಲದ ಪಥಗಳೆಂದು ಸಾರಿದರು—

ಆಕಾಶಾತ್ಪತಿತಂ ತೋಯಂ
ಯಥಾಗಚ್ಛತಿ ಸಾಗರಮ್ ।
ಸರ್ವದೇವ ನಮಸ್ಕಾರಃ
ಕೇಶವಂ ಪ್ರತಿಗಚ್ಛತಿ ॥

ಎಂಬಂತೆ ಯಾವ ದೇವನನ್ನು ಭಜಿಸಿದರೂ ಒಂದೇ ಪರಬ್ರಹ್ಮನನ್ನು ಭಜಿಸಿದಂತಾಗುತ್ತದೆ ಎಂದು ತೋರಿಸಿಕೊಟ್ಟರು. ಎಲ್ಲರೂ ಒಂದೇ ಸತ್ಯವನ್ನು ಭಿನ್ನ ಭಿನ್ನ ಕೋನದಿಂದ ನೋಡುತ್ತಾರೆಂದು ತಿಳಿಸಿಹೇಳಿದರು. ತಾವು ಯಾವುದನ್ನು ಹೇಳಿದರೂ ಅದನ್ನು ಆಚರಿಸಿಯೂ ತೋರಿಸಿದರು. ಗೃಹಸ್ಥ ಜೀವನ ನಡೆಸುತ್ತಿದ್ದೂ ತೀಕ್ಷ್ಣ ವೈರಾಗ್ಯವನ್ನು ಸಾಧಿಸಿದರು. ಕಾಯ ಕಾಂಚನವನ್ನು ತಮ್ಮ ಜೀವನ ಪರ್ಯಂತ ತ್ಯಜಿಸಿದರು. ಲೋಕಮಾತೆ ಕಾಳಿಯನ್ನು ಪ್ರತ್ಯಕ್ಷ ತಾಯಿಯೇ ಎಂಬಂತೆ ಅವಳನ್ನು ಹತ್ತು ಹಲವು ಬಗೆಯಿಂದ ಪೂಜಿಸಿದಂಥ ಭಕ್ತರಿವರು. ಜಗತ್ತಿನ ಮಾಯೆಯ ಬಗ್ಗೆ ತಿಳಿದುಕೊಂಡು ಮಾಯೆಯ ಅಜ್ಞಾನ ಬಂಧನವನ್ನು ಕಿತ್ತೊಗೆದ ಜ್ಞಾನಿಗಳಿವರು. ಹಲವು ರೂಪಗಳನ್ನು ಧರಿಸಿದ ವಿರಾಟ ಭಗವಂತನ ಸೇವೆಯೇ ನಮ್ಮನ್ನು ಅವನೆಡೆಗೆ ಒಯ್ಯುವುದೆಂದು ಇಡೀ ಕರ್ಮಯೋಗದ ಸಾರವನ್ನೇ ಬೋಧಿಸಿದ ಕರ್ಮಯೋಗಿಗಳಿವರು.

ವಂಗದೇಶ ಅಂದರೆ ಈಗಿನ ಪಶ್ಚಿಮ ಬಂಗಾಳದ ಹೂಗ್ಲಿ ನದಿ ದಡದಲ್ಲಿರುವ ಕಾಮಾರಪುಕುರ ಎಂಬಲ್ಲಿ ಖುದಿರಾಮ ಚಟ್ಟೋಪಾಧ್ಯಾಯ ಮತ್ತು ಚಂದ್ರಮಣೀದೇವಿ ಎಂಬ ಸಾತ್ತ್ವಿಕ ಸರಳ ಜೀವಿಗಳ ಹೊಟ್ಟೆಯಿಂದ ಇವರು ಸನ್ 1836 ರಲ್ಲಿ ಜನಿಸಿದರು. ತಂದೆ ಅತ್ಯಂತ ಬಡವರು ಮತ್ತು ದೈವಭಕ್ತರು. ನಿತ್ಯವೂ ಶ್ರೀರಾಮಚಂದ್ರನ ಪೂಜೆಯಿಲ್ಲದಲ್ಲಿ ಬಾಯಲ್ಲಿ ನೀರು ಕೂಡ ಹಾಕುತ್ತಿರಲಿಲ್ಲ. ಬಡವರಾದ ಕಾರಣ ಮಗುವಿನ ಜನ್ಮ ಗುಡಿಸಲಿನಲ್ಲಿ ಭತ್ತ ಹುರಿಯುವ ಒಲೆಯ ಹತ್ತಿರ ಮೂಲೆಯಲ್ಲಾಯಿತು. ಇವರು ಹುಟ್ಟುವ ಪೂರ್ವದಲ್ಲಿ ತಂದೆ ಖುದಿರಾಮರು ಗಯಾಕ್ಷೇತ್ರಯಾತ್ರೆ ಮಾಡಿದ್ದರು. ಆಗ ಅಲ್ಲಿಯ ಗದಾಧರನು ತಾನು ಇವರ ಹೊಟ್ಟೆಯಿಂದ ಹುಟ್ಟಿ ಬರುವುದಾಗಿ ಸ್ವಪ್ನ ಮೂಲಕ ತಿಳಿಸಿದ್ದರಿಂದ ಹುಟ್ಟಿದ ಮಗುವಿಗೆ 'ಗದಾಧರ' ನೆಂದು ಹೆಸರಿಟ್ಟರೂ, ತಾವು ರಾಮಚಂದ್ರನ ಭಕ್ತರಾದುದರಿಂದ ಪ್ರೀತಿಯಿಂದ 'ರಾಮಕೃಷ್ಣ' ಎಂದು ಕರೆಯುತ್ತಿದ್ದುದರಿಂದ ಮುಂದೆ ಇದೇ ಹೆಸರು ಜಗತ್ಪ್ರಸಿದ್ಧವಾಯಿತು. ರಾಮಕೃಷ್ಣನಿಗೆ ರಾಮಕುಮಾರ, ರಾಮೇಶ್ವರ, ಎಂಬ ಇಬ್ಬರು ಸೋದರರು ಮತ್ತು ಸರ್ವಮಂಗಳಾ ಎಂಬ ಸೋದರಿ ಇದ್ದರು.

ರಾಮಕೃಷ್ಣರು ಬಾಲ್ಯದಲ್ಲಿರುವಾಗಲೇ ವಿಲಕ್ಷಣವಾಗಿದ್ದರು. ಪ್ರಕೃತಿ ಸೌಂದರ್ಯ ನೋಡುತ್ತ ಮೈಮರೆಯುತ್ತಿದ್ದರು. ಒಮ್ಮೆ ಐದು ವರುಷದವರಿದ್ದಾಗ ಆಕಾಶದಲ್ಲಿ ಬಲಾಕ ಪಕ್ಷಿಗಳ ಸಾಲು ಹಾರಿಹೋಗುವುದನ್ನು ನೋಡಿ ಮೈಮರೆತು ಬಿದ್ದಿದ್ದರಂತೆ. ಚಿಕ್ಕವರಿರುವಾಗಲೇ ಪಿತೃವಿಯೋಗವಾದಾಗ ಇವರಿಗೆ ಪ್ರಪಂಚದ ನಶ್ವರತೆಯ ಅರಿವಾಗಿತ್ತಂತೆ. ಮನಸ್ಸು ಸದಾಕಾಲದಲ್ಲಿಯೂ ಭಗವಂತನ ಕಡೆಗೆ ಹರಿಯುತ್ತಿದ್ದುದರಿಂದ ಇವರಿಗೆ ಯಾವುದೇ ಲೌಕಿಕ ವಿದ್ಯೆ ತಗಲಲಿಲ್ಲ. ಇವರು ಒಂಬತ್ತು ವರ್ಷದವರಿದ್ದಾಗ ಹಿರಿಯಣ್ಣ ರಾಮಕುಮಾರ ಇವರ ಉಪನಯನ ಮಾಡಿದನು. ಆಗ ತನ್ನನ್ನು ಮೊದಲಿನಿಂದಲೂ ವಾತ್ಸಲ್ಯದಿಂದ ನೋಡುತ್ತಿದ್ದ ಧನಿ ಎಂಬ ಹೆಣ್ಣುಮಗಳ ಅಪೇಕ್ಷೆಯಂತೆ ಹಟದಿಂದ ಅವಳಿಂದಲೇ ಮೊದಲಭಿಕ್ಷೆ ಸ್ವೀಕರಿಸಿದರಂತೆ. ಇದರಿಂದ ಬೆಳೆಯುವ ಪೈರು ಮೊಳಕೆಯಲ್ಲಿ—ಎಂಬಂತೆ ಇವರ ವಿಶ್ವ ಬಾಂಧವ್ಯ ಆಗಲೇ ವ್ಯಕ್ತವಾಗಿತ್ತು. ಮೊದಲಿನಿಂದಲೂ ಶಾಲೆಗೇ ಹೋಗದ ಇವರ ಸ್ಥಿತಿಯ ಬಗ್ಗೆ ಅಣ್ಣ ಚಿಂತಿತನಾದಾಗ ಅವನಿಗೆ—ಯಾವುದನ್ನು ಅರಿತರೆ ಸಮಸ್ತವನ್ನು ಅರಿತಂತಾಗುವುದೋ ಅಂತಹ ಜ್ಞಾನಕ್ಕಾಗಿ ಹಂಬಲಿಸುವೆ- ಎಂದು ಹೇಳುತ್ತಿದ್ದರು. ತಮ್ಮ ಸಮಯವನ್ನೆಲ್ಲ ದೇವರ ನಾಮ ವಿಚಾರಗಳಲ್ಲಿಯೇ ಕಳೆಯುತ್ತಿದ್ದರು. ಇಂತಹ ಸಮಯದಲ್ಲಿಯೇ ದೇವರಿಗಾಗಿಯೇ ಜೀವನವನ್ನು ಮೀಸಲಾಗಿಡುವ ಸುಸಂಧಿ ಒದಗಿ ಬಂದಿತು.

ಕಲ್ಕತ್ತೆಯಲ್ಲಿ ಆಗ 'ರಾಣಿ ರಾಸಮಣಿ' ಎಂಬ ಶ್ರೀಮಂತ ಹೆಣ್ಣುಮಗಳಿದ್ದಳು. ಅತ್ಯಂತ ದಯಾಳುವೂ, ದಾನಿಯೂ ಆದ ಅವಳಿಗೆ ಜಗಜ್ಜನನಿ ಕಾಳಿಮಾತೆಯು ಇಷ್ಟ ದೈವವಾಗಿದ್ದಳು. ಆ ದೇವಿಯ ಇಚ್ಛೆಯಂತೆ ದಕ್ಷಿಣೇಶ್ವರದಲ್ಲಿ ಸನ್ 1855 ರಲ್ಲಿ ಭವ್ಯ ಕಾಳೀದೇವಾಲಯ ಕಟ್ಟಿಸಿದಳು. ಆದರೆ ಸಂಪ್ರದಾಯ ಪ್ರಧಾನವಾದ ಆಗಿನ ಕಾಲದಲ್ಲಿ ಯಾವ ಬ್ರಾಹ್ಮಣ ಪೂಜಾರಿಯೂ ಪೂಜೆಗೆ ಬರಲೊಪ್ಪದಿದ್ದಾಗ ಶ್ರೀರಾಮಕೃಷ್ಣರು ಆ ಸಂಪ್ರದಾಯವನ್ನು ಮುರಿದು ಆದರ ಪೂಜೆಗೆ ನಿಂತರು.

ರಾಣಿ ರಾಸಮಣಿಯ ಸೋದರಳಿಯನಾದ ಮಥುರಬಾಬುವಿನಿಂದ ಸರ್ವ ಅನುಕೂಲತೆಯು ದೊರಕೊಡನೆಯೇ ಗದಾಧರ ದಕ್ಷಿಣೇಶ್ವರದಲ್ಲಿಯೇ ನೆಲಸಿದರು. ದಿನಾಲು ಹೆಚ್ಚು ಹೆಚ್ಚು ತನ್ಮಯತೆಯಿಂದ ಪೂಜೆ ಮಾಡುತ್ತಿದ್ದರು. ಪೂಜೆ ಮಾಡುತ್ತ, ಒಂದು ಕೈಯಲ್ಲಿ ಖಡ್ಗವನ್ನು ಧರಿಸಿ ಇನ್ನೊಂದು ಅಭಯ ಹಸ್ತವನ್ನು ಧರಿಸಿ ಮೊಗದಲ್ಲಿ ಮಂದಹಾಸ, ಕೊರಳಲ್ಲಿ ರುಂಡಮಾಲೆ ಧರಿಸಿದ ಆ ಭವ್ಯ ಭವತಾರಿಣಿಯನ್ನು ನೋಡುತ್ತ ಭಾವದಲ್ಲಿ ತನ್ಮಯರಾಗಿ, ಪ್ರತ್ಯಕ್ಷ ಕಾಳಿಮಾತೆಯನ್ನು ಪೂಜಿಸುತ್ತಲಿರುವೆ ಎಂದು ಮೈಮರೆಯುತ್ತಿದ್ದರು. ಕೇವಲ ಪೂಜೆಯಿಂದ ಅವರ ಮನಸ್ಸು ತೃಪ್ತವಾಗಲಿಲ್ಲ. ಇನ್ನೂ ಹೆಚ್ಚು ಸಾಧನೆ ಮಾಡಬಯಸಿ ಅದಕ್ಕಾಗಿ ಸಮೀಪದ ಪಂಚವಟಿಯನ್ನು ಆಯ್ದುಕೊಂಡರು 'ಯಾ ನಿಶಾ ಸರ್ವ ಭೂತಾನಾಂ ತಸ್ಯಾಂ ಜಾಗರ್ತಿ ಸಂಯಮೀ'—ಎಂಬಂತೆ ಅಲ್ಲಿ ರಾತ್ರಿಯೆಲ್ಲಾ ಎಚ್ಚರವಿದ್ದು ಸಾಧನೆ, ಜಪ ತಪ ಮಾಡುತ್ತಿದ್ದರು. ಸಾಧನೆಯ ರೂಪದಲ್ಲಿ ನವವಿಧ ಭಕ್ತಿಯನ್ನೂ ಪ್ರಯೋಗ ಮಾಡಿನೋಡಿದರು. ಹನುಮಂತನ ದಾಸ್ಯ, ಅರ್ಜುನನ ಸಖ್ಯ, ಗೋಪಿಯರ ಮಧುರ ಮತ್ತು ದೇವಕಿಯ ವಾತ್ಸಲ್ಯ ಹೀಗೆ ಎಲ್ಲ ಭಾವಗಳಲ್ಲಿಯೂ ತೇಲುತ್ತಿದ್ದರು. ಇವರು ಆ ಭಗವತಿಯ ದರ್ಶನಕ್ಕಾಗಿ ಹಗಲು ರಾತ್ರಿ ದೀನರಾಗಿ ಪ್ರಾರ್ಥಿಸುತ್ತಿದ್ದರು. ಕಣ್ಣೀರು ಗರೆಯುತ್ತಿದ್ದರು. ಒಂದು ಸಲವಂತೂ ಮೂರು ಹಗಲು ಮೂರು ರಾತ್ರಿ ಸತತವಾಗಿ—'ತಾಯಿ ನನಗೆ ದರ್ಶನ ಕೊಡು'—ಎಂದು ಗಂಗಾನದಿಯ ತಟದಲ್ಲಿ ಹೊರಳಾಡಿದಾಗ್ಯೂ ಯಾವುದೇ ಫಲದೊರೆಯದಿದ್ದಾಗ, ನೇರವಾಗಿ ಕಾಳಿ ದೇವಾಲಯಕ್ಕೆ ಬಂದು ಆತ್ಮಹತ್ಯೆಗೆ ಪ್ರಯತ್ನಿಸಿದಾಗ ಕೂಡಲೇ ಕಾಳಿಮಾತೆ ದರ್ಶನವಾಯಿತು. ಸಾಕ್ಷಾತ್ ಕಾಳಿಮಾತೆ ಅವರ ಜೊತೆ ಚಿಕ್ಕ ಹುಡುಗಿಯ ರೂಪದಿಂದ ಇರುತ್ತಿದ್ದಳಂತೆ.

ಹೀಗೆ ಇವರು ಯಾವಾಗಲೂ ಭಗವದ್ ಭಾವದಲ್ಲಿ ಮೈಮರೆತು ಅಡ್ಡಾಡುವುದು, ಇವೇ ಮುಂತಾದ ಜೀವನ ಕ್ರಮ ಸಾಮಾನ್ಯರಿಗಿಂತ ತೀರಭಿನ್ನವಾದುದರಿಂದ ಸಾಮಾನ್ಯರು ಇವರನ್ನು ಹುಚ್ಚನೆಂದು ಬಗೆದರು. ಈ ವರ್ತಮಾ

ತಾಯಿಯ ಕಿವಿಯವರೆಗೂ ತಲುಪಿ ಆ ಜೀವ ಮಮ್ಮಲಮರುಗಿದರೂ ತಮ್ಮ ಮಗ ಹುಚ್ಚನಾಗುವಂತಹ ಹೀನ ದೀನ ಸ್ಥಿತಿಯಲ್ಲಿಲ್ಲವೆಂದು ಆ ಮಾತೃ ಹೃದಯಕ್ಕೆ ತಿಳಿದಿತ್ತು. ಆದರೂ ನಾಲ್ಕು ಜನರಂತೆ ಇರಬೇಕಾದರೆ ಇವನಿಗೊಂದು ಮದುವೆ ಮಾಡಬೇಕೆಂಬ ವಿಚಾರಕ್ಕೆ ಇವರಿಂದ ಹೆಚ್ಚು ಪ್ರತಿಭಟನೆ ಬರಲಿಲ್ಲ. ಆಗ ಅಲ್ಲೆಲ್ಲಾ ಈಗಿನ ವರದಕ್ಷಿಣೆಯಂತೆ ಕನ್ಯಾದಕ್ಷಿಣೆಯು ಚಲ್ತಿಯಿತ್ತು. ಬಡ ಮನೆತನದ ಸ್ಥಿತಿಯಿಂದಾಗಿ ಬೇಗನೇ ಕನ್ಯೆ ದೊರೆಯದಿದ್ದಾಗ ಇಂತಹ ಕನ್ಯೆ ನನಗಾಗಿಯೇ ಹುಟ್ಟಿದೆ ಎಂದು ಇವರೇ ತಿಳಿಸಬೇಕಾಯಿತು. ಅದರಂತೆ ಜಯರಾಮವಟಿಯ ರಾಮಚಂದ್ರ ಮುಖ್ಯೋಪಾಧ್ಯಾಯರ ಮಗಳು 'ಶಾರದಾ' ಇವರ ಧರ್ಮಪತ್ನಿಯಾದರು. ಇವರು ಇಟ್ಟ ಹೆಜ್ಜೆಯಲ್ಲೇ ಹೆಜ್ಜೆ ಇಟ್ಟು ತನ್ನ ಬದುಕಿನ ಸಮಸ್ತ ಇಚ್ಛೆ ಅಮಿಷಗಳನ್ನೆಲ್ಲಾ ದೂರಸರಿಸಿ ಆದರ್ಶಕ್ಕಾಗಿ ವ್ಯಾಕುಲ ಪಡದೆ, ಪತಿಸೇವೆಯಲ್ಲಿಯೇ ತಮ್ಮ ಜೀವನವನ್ನು ಕಳೆದರು. ಅವರೇ ಮುಂದೆ 'ಮಾತೆ ಶಾರದಾಂಬ'- ಎಂದು ಲೋಕವಿಖ್ಯಾತರಾದರು.

ಮದುವೆಯಾದರೆ ಹುಚ್ಚು ದೂರಾಗುವದೆಂಬ ಹುಚ್ಚು ನಿರೀಕ್ಷೆ ಸುಳ್ಳಾಗಿತ್ತು. ಬದಲಾಗಿ ಸಾಧನೆ ಮತ್ತಷ್ಟು ತೀವ್ರವಾಯಿತು. ಈಗ ತಾಯಿ ಕಾಳಿಯೊಡನೆ ಪ್ರತ್ಯಕ್ಷ ಮಾತನಾಡುವ ಸ್ಥಿತಿಗೆ ಬಂದಿದ್ದರೂ, ಸಾಧನೆ ಫಲಿಸಿರಲಿಲ್ಲ. ಈ ಮಧ್ಯೆ ಬ್ರಾಹ್ಮಣ ಭೈರವಿಯ ಪರಿಚಯವಾಗಿ ಅವಳನ್ನು ಗುರುವೆಂದು ಸ್ವೀಕರಿಸಿ ಅವಳಿಂದ ತಾಂತ್ರಿಕ ವಿದ್ಯೆಯನ್ನೆಲ್ಲಾ ಕಲಿತರು. ಈಗ ಧ್ಯಾನದಲ್ಲಿ ಕುಂಡಲಿನಿ ಜಾಗ್ರತವಾಗಿ ಹೃದಯ ಪದ್ಮವರೆಗೆ ಏರುತ್ತಿತ್ತು. ಮೈ ಕಟ್ಟಿಗೆಯಂತೆ ಜಡವಾಗುತ್ತಿತ್ತು. ಈ ಸಾಧನೆಯಲ್ಲಿ ಪರಿಪಕ್ವತೆ ದೊರೆಯುತ್ತಿದ್ದಂತೆ ಯೋಗ ಸಂಕಲ್ಪದಂತೆ ಸಮಯಕ್ಕೆ ಸರಿಯಾಗಿ ಸನ್ಯಾಸ ವೃತ್ತಿಯಲ್ಲಿ ಎಲ್ಲಿ ಬೇಕೆಂದಲ್ಲಿ ತಿರುಗುತ್ತ, ಮೂಲತಃ ಪಂಜಾಬದವರಾದ 'ತೋತಾ ಪುರಿ' ಎಂಬ ಸಾಧು ಸಮಾಗಮವಾಯಿತು. ಆತ ಇವರಿಗೆ ವೇದಾಂತದ ಪರಿಚಯ ಮಾಡಿಸಿಕೊಟ್ಟು, ಇವರಿಗೆ ಅದ್ವೈತ ವೇದಾಂತ ಬೋಧಿಸಿದರು. ಇದೇ ಸ್ಥಿತಿಯಲ್ಲಿ ರಾಮಕೃಷ್ಣರು ಉಳಿದ ಧರ್ಮಗಳನ್ನೂ ಅಭ್ಯಸಿಸಿದರು. ಮಹಮ್ಮದೀಯ ಧರ್ಮವನ್ನು ಅಭ್ಯಸಿಸುವಾಗ ಎಲ್ಲ ವರ್ತನೆಯನ್ನು ಮಹಮ್ಮದೀಯರಂತಾಗಿದ್ದರು ಆಗ ಕಾಳಿ ದೇವಸ್ಥಾನದೊಳಗೆ ಹೋಗುತ್ತಿರಲಿಲ್ಲ. ಇದರಂತೆ ಕ್ರೈಸ್ತ ಮತ್ತು ಬೇರೆ ಧರ್ಮಗಳನ್ನು ಪ್ರತ್ಯಕ್ಷವಾಗಿ ಅಭ್ಯಸಿಸಿದರು. ಇವರ ಸಾಧನಾ ಫಲವನ್ನು ಕಂಡು ತೋತಾಪುರಿಯು ಇವರಿಗೆ ಸನ್ಯಾಸವನ್ನು ಕೊಡಲು ನಿರ್ಧರಿಸಿದರು. ಇವರೂ ಅಷ್ಟೇ ಸಂತೋಷದಿಂದ ಸನ್ಯಾಸ ಸ್ವೀಕರಿಸಿ ಅಂದಿನಿಂದ—ರಾಮಕೃಷ್ಣ ಪರಮಹಂಸರಾದರು.

ಪರಮಹಂಸವೃತ್ತಿಯನ್ನು ಧರಿಸಿದೊಡನೆ ಇವರು ಜ್ಯೋತಿಃಪುಂಜವಾದರು. ಹೂ ಅರಳ ವಾಸನೆಯು ಕಂಪು ಇಡುಗಿತು ಮಾನವ್ಯದ ಹಿತಕ್ಕಾಗಿ ಯುಕ್ತ ಸ್ಥಿತಿಯಲ್ಲಿ ಜಗದ ಹೊಸ್ತಿಲಲ್ಲಿ ನಿಂತು ಸಚ್ಛಿಷ್ಯರಿಗಾಗಿ ಹಂಬಲಿಸಿದರು. ಈ ಸಂಕಲ್ಪದಂತೆ ಅನೇಕ ಶಿಷ್ಯರು ಧಾವಿಸಿ ಬಂದರು, ಉಪದೇಶಾಮೃತ ಸವಿದರು, ಧನ್ಯರಾದರು. ಅವರಲ್ಲಿ ನರೇಂದ್ರ ಮುಖ್ಯನು. ತಮ್ಮ ಸಮಸ್ತವನ್ನೂ ಅವರಲ್ಲಿ ಧಾರೆ ಎರೆದು ಅವರನ್ನು, ವಿಶ್ವಮಾನವನನ್ನಾಗಿ ಮಾಡಿದರು. ಅವರೇ ಮುಂದೆ 'ವಿವೇಕಾನಂದ' ಎಂದು ಪ್ರಸಿದ್ಧನಾದನು. ಭಾರತದ ಸಂಸ್ಕೃತಿಯನ್ನು ವಿಶ್ವದಲ್ಲಿ ಮೊಳಗಿಸಿದನು.

ಇವರು ಬಂದವರೆಲ್ಲರನ್ನೂ ಪ್ರೀತಿವಿಶ್ವಾಸಗಳಿಂದ ಮಾತನಾಡಿ ಅವರಲ್ಲಿ ಆತ್ಮಧೈರ್ಯವನ್ನು ತುಂಬುತ್ತಿದ್ದರು. ಅವರವರ ಧರ್ಮದಲ್ಲಿಯೇ ಶ್ರದ್ಧೆಯಿಂದ ಮುಂದುವರಿಯಲು ತಿಳಿಸುತ್ತಿದ್ದರು. ಮನುಷ್ಯ ಕಾಮ ಕಾಂಚನಾಸಕ್ತನಾಗಿದ್ದಷ್ಟು ಅವನು ದಿವ್ಯತೆ ಪಡೆಯಲಾರನು. ಅದರ ತ್ಯಾಗವೇ ಅವನ ಜೀವನದ ಪರಮ ಧ್ಯೇಯ. ಮನುಷ್ಯ ಸಂಸಾರ ತ್ಯಜಿಸಲಾರ, ಆದರೆ ಅದರಲ್ಲಿದ್ದುಕೊಂಡು ಭಗವಂತನನ್ನು ಚಿಂತಿಸುವುದೇ ನಿಜವಾದ ಮನುಷ್ಯ ಧರ್ಮ—ಎಂಬ ಅತ್ಯಂತ ಸರಳವಾದ ವಿಚಾರಗಳನ್ನು ಸುಂದರವಾದ ಉದಾಹರಣೆಗಳಿಂದ ಮಾರ್ಮಿಕವಾಗಿ ತಿಳಿಸುತ್ತಿದ್ದರು. ಇವರ ಮಾತೇ ಉಪದೇಶ, ಜೀವನ ಕ್ರಮವೇ ಧರ್ಮಸಾರ! ಹೀಗೆ ತಮ್ಮ ಜೀವನದುದ್ದಕ್ಕೂ ಅನೇಕ ಜೀವಿಗಳಿಗೆ ಸಾರ್ಥಕ್ಯ ಒದಗಿಸಿದರು ಬಾಳಿನ ಮುಸ್ಸಂಜೆಯಾಯಿತೇನೋ ಎಂಬಂತೆ ಗಂಟಲು ಬೇನೆ ಗಂಟುಬಿದ್ದಿತು. ಅದೊಂದು ಮಹಾವ್ಯಾಧಿ ಎಂದು ಗೊತ್ತಿದ್ದೂ, ಒಂದು ತುತ್ತು ಅನ್ನ ಕೂಡ ಗಂಟಲಲ್ಲಿ ಇಳಿಯಲಾರದಂತಹ ಸ್ಥಿತಿಯಲ್ಲಿ ಅವರೆಂದೂ ಅದಕ್ಕೆ ಲಕ್ಷ್ಯ ಕೊಡಲಿಲ್ಲ. ಆದರೆ ಬಂದ ಕಾರ್ಯ ಮುಗಿದಿದ್ದು, ಮತ್ತೆ ಪುನಃ ಮರಳಿ ಹೋಗಲು ಒಂದು ನೆಪ ಬೇಕಾಗಿದ್ದುದರಿಂದ ಅದೇ ನೆಪದಿಂದ ತಮ್ಮ ವಯಸಿನ 50 ರಲ್ಲಿ ಅಂದರೆ ಸನ್ 1886 ರ ಆಗಸ್ಟ್ 15 ರ ಮಧ್ಯರಾತ್ರಿ ಪರಂಧಾಮ ಹೊಂದಿದರು ಅವರು ನಮ್ಮನ್ನಗಲಿ ಇದೇ ಆಗಸ್ಟ್ 15 ಕ್ಕೆ ಸರಿಯಾಗಿ ಒಂದು ನೂರು ವರುಷವಾಯಿತು. ಈ ಸಂದರ್ಭದಲ್ಲಿ ಅವರ ಅನುಗ್ರಹದಿಂದ ನಮ್ಮ ಪರಮಾರ್ಥ ದಾರಿ ಸುಗಮವಾಗಿ ನಾವೆಲ್ಲ ಮೋಕ್ಷಭಾಗಿಗಳಾಗೋಣ ಎಂದು ಹಾರೈಸೋಣ!



# ಶ್ರೀ ರಾಘವೇಂದ್ರಗುರುಗಳು

ದೇವರಲ್ಲಿ ತಿರುಪತಿ ತಿಮ್ಮಪ್ಪ ಹೇಗೋ ಗುರುಗಳಲ್ಲಿ ಮಂಚಾಲಿ ರಾಘಪ್ಪ (ಶ್ರೀರಾಘವೇಂದ್ರ ಸ್ವಾಮಿಗಳವರು, ಹಾಗೆ ಜಗತ್ಪ್ರಸಿದ್ಧರಾಗಿ, ಜನೋಪಕಾರಿಗಳಾಗಿ ಆಸ್ತಿಕ ಜನ ಮನೋಹರರಾಗಿ, ಕಾಮಧೇನು ಕಲ್ಪವೃಕ್ಷರಾಗಿ ಸೂರ್ಯ ಚಂದ್ರರಂತೆ ವಿರಾಜಿಸುತ್ತಿರುವ ಅಂಶ ಇಡಿ ಜಗತ್ತಿಗೆ ಸಾಕಷ್ಟು ವ್ಯಕ್ತವಾಗಿದೆ ಶ್ರೀರಾಘವೇಂದ್ರರು ಕೃತಯುಗದಲ್ಲಿ ಭಾಗವತೋತ್ತಮರಾದ, ಯಾವತ್ತೂ ತಮ್ಮ ದೈವೀಕ ಶಕ್ತಿ ಪ್ರಭಾವದಿಂದ ಅಸುರೀ ಶಕ್ತಿಯೊಡನೆ ಹೋರಾಡಿ, ಸರ್ವೋತ್ತಮನಾದ, ಸರ್ವಾಂತರ್ಯಾಮಿಯಾದ, ಸರ್ವಪ್ರೇರಕನಾದ, ಸರ್ವರಕ್ಷಕನಾದ, ಅನಂತ ಕಲ್ಯಾಣ ಪರಿಪೂರ್ಣನಾಗಿ ಸರ್ವದೋಷದೂರನಾಗಿ ಸಕಲ ಜೀವ ಜಡಾದಿಗಳಿಂದ ಅತ್ಯಂತ ಭಿನ್ನನಾದ, ಅಪ್ರಾಕೃತ ಶರೀರವಾದ, ಸದಾಶಾಶ್ವತನಾದ, ತ್ರಿಗುಣವರ್ಜಿತನಾದ ನಿಗಮಾದಿಗಳಿಗೂ ಸಾಕಲ್ಯೇನ ಸಿಗದ ಸಾಕ್ಷಾತ್ ನರಸಿಂಹನನ್ನು ಕಂಬದಲ್ಲಿ ಕರೆತರಿಸಿದ ನೈಜಧೀರ ಭಕ್ತಾಗ್ರೇಸರರು. ಇವರೇ ವ್ಯಾಸಕ್ರಮ ಕರ್ತರು, ವಿಜಯನಗರ ಸಿಂಹಾಸನ ಏರಿದ ವಿಚಿತ್ರ ಚರಿತರು. ಇಷ್ಟಕ್ಕೆ ತೃಪ್ತರಾಗದೇ ಜೀವೋತ್ತಮರಾದ ಶ್ರೀಮಧ್ವಾಚಾರ್ಯರ ಸರ್ವಮೂಲ ಗ್ರಂಥ, ಹಾಗೂ ಶ್ರೀ ಜಯತೀರ್ಥರ ಟೀಕಾಗ್ರಂಥಗಳಿಗೆ ವಿಸ್ತಾರವಾದ ಟಿಪ್ಪಣಿಗ್ರಂಥಗಳನ್ನು ರಚಿಸಿದ ಗುರುಗಳು.

ಶ್ರೀರಾಘವೇಂದ್ರರು ತಾವಾಗಿ ವೃಂದಾವನಸ್ಥ 300 ವರ್ಷಗಳು ಎಂದೋ ಕಳೆದರೂ ಇಂದಿಗೂ ಭರತ ಖಂಡದ ಊರು ಕೇರಿ ಗ್ರಾಮ ಹಳ್ಳಿ ಎಲ್ಲೆಡೆ ವೃಂದಾವನಗಳು ನೂತನವಾಗಿ ಪ್ರತಿಷ್ಠಿತವಾಗಿ ಸೇವಾಕೈಂಕರ್ಯಾದಿಗಳು ವೃದ್ಧಿಯಾಗುತ್ತಿರುವುದು ಎಷ್ಟು ಆಶ್ಚರ್ಯಕರ! ಹೀಗೆ ವಂದಿತಾಖಿಲ ವಂದಾರು ಸಂದೋಹ ಮಂದಾರ, ಮೃತಪುತ್ರ ಸಂಜೀವನ, ಹುತಾಶನಾರ್ಪಿತ ರತ್ನಹಾರಾದ್ಯನೇಕ ಮಹಾಮಹಿಮಾ ಪ್ರಕಾಶಿತ, ಮೂಕಪಂಗು ಬಧಿರಾಂಧಕಾದಿ ದೀನಜನ ದುಃಖಾಪಹಾರ, ಅಪಾರ ಕರುಣಾರಸಪೂರ್ಣ, ಸಕಲಜನಾಧಾರ, ಮಂತ್ರಾಲಯ ಮಂದಿರವಿಹಾರ, ಭಕ್ತಜನ ಮಂದಾರರಾದ ಗುರು ಸಾರ್ವಭೌಮರೆನಿಸಿದ ಶ್ರೀರಾಘವೇಂದ್ರರು ತಮ್ಮ ಜ್ಞಾನ ಹಾಗೂ ಕಾರುಣ್ಯಪ್ರವಾಹವನ್ನು ನಾನಾ ಶಾಖೋಪಶಾಖೆಗಳಲ್ಲಿ ಎಲ್ಲೆಡೆ ಪ್ರವಹಿಸುವಂತೆ ಮಾಡಿ ಅಸಂಖ್ಯಾತ ಆಸ್ತಿಕರನ್ನು ಉದ್ಧರಿಸಿದ ಹಾಗೂ ಉದ್ಧರಿಸುತ್ತಿರುವ ಮಹಾಮಹಿಮೆಗಳನ್ನು ಸಾಕಲ್ಯೇನ ಕೊಂಡಾಡಲು ಯಾರಿಗೆ ತಾನೆ ಸಾಧ್ಯ! ಇವರು ದೇವತೆಗಳೆಂಬುದು ನಿರ್ವಿವಾದ. ಇವರಿಗೆ ಈ ಶಕ್ತಿ ಯಾರಿಂದ ಬಂತು ಎಂದರೆ ಪ್ರಾಣಿಜನ ಪ್ರಾಣನಾದ ನಮ್ಮ ಶ್ರೀ ತಿರುಪತಿ ವೆಂಕಟಾಚಲಪತಿಯಿಂದ ಎಂಬುದನ್ನು ಮರೆಯಬಾರದು. ಶ್ರೀ ರಾಘವೇಂದ್ರರು ಮಾಡಿದ ಅಪಾರ ಅಮಾನುಷ ಕಾರ್ಯಾದಿಗಳನ್ನು ಪೂರ್ವದಲ್ಲಿ ಅವರ ತಮ್ಮೆಂದಿರೇ ಆಗಿದ್ದ ಶ್ರೀಜಗನ್ನಾಥ ದಾಸರು ತಮ್ಮದೊಂದು ವಿಸ್ತಾರ ಕೃತಿಯಲ್ಲಿ "ರಾಘವೇಂದ್ರ ರಾಜಿತಗುಣಸಾಂದ್ರ" ಎಂಬ ಕೃತಿಯಲ್ಲಿ ವಿಚಿತ್ರವಾಗಿ ಪ್ರಾಸಾಧಿಕವಾಣಿಯಲ್ಲಿ ಚಿತ್ರಿಸಿರುತ್ತಾರೆ.

ಗಣೇಶಾಂಶ ಸಂಭೂತರಾದ ಶ್ರೀಗೋಪಾಲ ದಾಸರು—ಶ್ರೀರಾಘವೇಂದ್ರರ ಚರಣಕಮಲವನ್ನು ಸ್ಮರಿಸುವ ಮನುಜನಿಗೆ ॥ಪ॥ ಕರೆಕರೆಗೊಳಿಸುವ ದುರಿತ ದುಷ್ಕೃತವೆಲ್ಲಾ ಕರಿಯು ಸಿಂಹನ ಕಂಡ ತೆರನಾಗುವುದಯ್ಯಾ ॥ಅ॥—ಎಂಬ ತಮ್ಮದೊಂದು ಕೃತಿಯಲ್ಲಿ

ರಾ ಎನೆ ರಾಶಿದೋಷಗಳ ದಹಿಸೂವ
ಘ ಎನೆ ಘನಜ್ಞಾನ ಭಕ್ತಿಯಿವ
ವೇಂ ಎನೆ ವೇಗದಿ ಜನನ ಮರಣದೂರ
ದ್ರ ಎನೆ ದ್ರವಿಣಾರ್ಥ ಶ್ರುತಿ ಪಾದ್ಯನಕಾಂಬ

ಎಂದು ಅವರ ನಾಮಸ್ಮರಣಮಾತ್ರದಿಂದ ಸಕಲ ಅನಿಷ್ಟನಿವೃತ್ತಿ. ಇಷ್ಟಪ್ರಾಪ್ತಿ ಹಾಗೂ ಭಗವದನುಗ್ರಹ ಲಭಿಸುವುದೆಂಬುದನ್ನು ನಿರೂಪಿಸಿದ್ದಾರೆ.

## ಹರಿದಾಸ ಸಾಹಿತ್ಯದಲ್ಲಿ ಶ್ರೀರಾಘವೇಂದ್ರರು

ಶ್ರೀಗುರುರಾಜರು ತಾವೇ ಒಬ್ಬ ಹಿರಿಯ ಹರಿದಾಸರು. ಏಕೆಂದರೆ ಅವರು ಶ್ರೀವ್ಯಾಸರಾಯರಾಗಿದ್ದಾಗ ಶ್ರೀಪುರಂದರದಾಸರಿಗೆ ಅಂಕಿತವಿತ್ತು ದಾಸಕೂಟಕ್ಕೆ ಬೀಜಪ್ರಾಯರಾಗಿ ಅವರಿಂದ 5 ಲಕ್ಷ ಕೃತಿಗಳು ರಚಿತವಾಗಲು ಪ್ರೇರಕರಾಗಿ ಅವುಗಳಿಗೆ "ಶ್ರೀಪುರಂದರ ಉಪನಿಷತ್" ಎಂದು ನಾಮಕರಣ ಮಾಡಿ, ಇಷ್ಟಕ್ಕೂ ತೃಪ್ತರಾಗದೇ ತಾವೆ ವ್ಯಾಸತ್ರಯಾದಿ ದಿವ್ಯಗ್ರಂಥ ಕರ್ತರಾದಾಗ್ಯೂ "ಶಿರಿಕೃಷ್ಣ" ಎಂಬ ಅಂಕಿತದಿಂದ ನೂರಾರು ಪದ, ಪದ್ಯ, ಸುಳಾದಿ ಉಗಾಭೋಗಾದಿಗಳನ್ನು ರಚಿಸಿ ವಿರಾಜಿಸಿದ್ದರು.

— ಶ್ರೀ ಚಿಂಚೋಳಿ ಪ್ರಹ್ಲಾದಾಚಾರ್ಯ

ಸಾಮಾನ್ಯವಾಗಿ ಚಾಲತಿಯಲ್ಲಿರುವ ಕೆಲವೇ ರಾಯರ ಮೇಲಿನ ಕೃತಿಗಳಲ್ಲದೇ ಬೇರೆ ಇಲ್ಲ ಎಂಬುದು ಅನೇಕ ಭಾವನೆ ಇರಬಹುದು. ಆದರೆ ಪರಿಶೀಲಿಸಿದರೆ ಸುಮಾರು 50 ಕ್ಕೂ ಮಿಗಿಲಾದ ಹರಿದಾಸರುಗಳಿಂದ 500 ಕ್ಕೂ ಮೀರಿದ ಕೃತಿಗಳು ರಚಿತವಾಗಿ ತನ್ಮೂಲಕ ಅವರ ನಾಮಸ್ಮರಣೆಫಲ, ಅವರ ಅಮಾನುಷ ಕಾರ್ಯಗಳು, ಅವರ ಅಪಾರ ವಿದ್ಯಾ ಪ್ರೌಢಿಮೆ, ಗ್ರಂಥ ಮಹಿಮೆ, ಶಾಂತಿ ಮಹಿಮೆ-ಇತ್ಯಾದಿಗಳು ಆ ಹರಿದಾಸಕೃತಿಗಳಲ್ಲಿ ವರ್ಣಿತವಾಗಿವೆ. ಆ ಕೃತಿಗಳ ಬಗ್ಗೆ ಬರೆಯಲ ಸಾವಿರಾರು ಪುಟಗಳಾಗುವುವು. ಇದಲ್ಲದೆ ಪಂಡಿತ ರಾಜಾ ಎಸ್. ಗುರುರಾಜಾಚಾರ್ಯರು (ಶ್ರೀಪಾದ ಪುತ್ರರು) ವಿದ್ಯಾಪ್ರಸನ್ನ ತೀರ್ಥರು ಹಾಗೂ ಕಟ್ಟಿಮನೆಯ ದಾಸರುಗಳಿಂದ ರಚಿತವಾದ ನೂರಾರು ಪದ, ಪದ್ಯ, ಸುಳಾದಿ, ಉಗಾಭೋಗಾದಿಗಳು ರಾಘವೇಂದ್ರರ ಮಹಿಮೆಯನ್ನು ಕೊಂಡಾಡುತ್ತಲಿವೆ. ಗುರು ಶ್ರೀ ಜಗನ್ನಾಥ ವಿಠಲರು 45 ಕೃತಿಗಳನ್ನೂ, ಜಗನ್ನಾಥ ದಾಸರು 15 ಕೃತಿಗಳನ್ನೂ, ಅಭಿನವಜನಾರ್ಧನ ವಿಠಲರು 12 ಕೃತಿಗಳನ್ನೂ, ವಿಜಯದಾಸರು 3, ಗೋಪಾಲದಾಸರು 8 ಪ್ರಾಣೇಶದಾಸರು 5, ಗುರುಗೋವಿಂದ ವಿಠಲರು 10 ಕೃತಿಗಳನ್ನೂ, ಬರೆದಿದ್ದಾರೆ ಎಂಬುದು ಮೇಲುನೋಟಕ್ಕೆ ಕಂಡುಬರುವ ಅಂಶ.

ರಾಯರ ಮಹಿಮೆ ಒಂದಡೆ ಬಿಟ್ಟು, ಅವರ ಅಪಾರ ಜ್ಞಾನಮಹಿಮೆ ಭಾಗವನ್ನು ಈಕ್ಷಿಸಿದಾಗ ಅಚ್ಚರಿಯಾಗುವುದು. ಇವರು ಶ್ರೀಮುಖ್ಯಪ್ರಾಣನ ವಿಶೇಷಾನುಗ್ರಹದಿಂದ 19ನೇ ಕಕ್ಷದಿಂದ 15 ನೆ ಕಕ್ಷಕ್ಕೆ ಹಾರಿ ಗ್ರಂಥ ರಚನೆಯ ಮೂಲಕ ಶ್ರೀಮಧ್ವಾಚಾರ್ಯರ ಮೂಲಗ್ರಂಥಗಳಿಗೂ ಜಯತೀರ್ಥರ ಟೀಕಾಗ್ರಂಥಗಳಿಗೂ ತಮ್ಮ ಸೇವೆ ಸಲ್ಲಿಸಿದ ಪ್ರಾಜ್ಞರು. ಹೀಗೆ ಅವರಿಂದ ರಚಿತವಾದ ಕೆಲವು ಗ್ರಂಥಗಳ ಹೆಸರುಗಳನ್ನು ನೋಡೋಣ—ತತ್ತ್ವಮಂಜರಿ, ಮಂತ್ರಾರ್ಥಮಂಜರಿ, ಗೀತಾರ್ಥಮಂಜರಿ, ರಾಮಚಾರಿತ್ರಮಂಜರಿ, ಕೃಷ್ಣಚಾರಿತ್ರ ಮಂಜರಿ, ವೇದಕ್ರಮವಿವೃತ್ತಿ, ತಂತ್ರದೀಪಿಕಾ ಚಂದ್ರಿಕಾ, ಪ್ರಕಾಶ, ಪ್ರಾತಃಸಂಕಲ್ಪ ಗದ್ಯ, ಸರ್ವಸಮರ್ಪಣಗದ್ಯ ತಾತ್ಪರ್ಯ ನಿರ್ಣಯಭಾವಸಂಗ್ರಹ, ಭಾಟ್ಟ ಸಂಗ್ರಹ, ಗೀತಾವಿವೃತ್ತಿ, ಪರಿಮಳ, ನ್ಯಾಯಮುಕ್ತಾವಳಿ, ದಶೋಪನಿಷತ್ ಖಂಡಾರ್ಥ, ಗೀತಾ ತಾತ್ಪರ್ಯ ಟೀಕಾ ವಿವರಣೆ, ತತ್ತ್ವಪ್ರಕಾಶಾರ್ಣವದೀಪ,

ವಾದಾವಳೀವ್ಯಾಖ್ಯಾನ, ಪ್ರಮಾಣ ಪದ್ಧತಿ ವ್ಯಾಖ್ಯಾನ, ತರ್ಕತಾಂಡವ ವ್ಯಾಖ್ಯಾನ, ಪ್ರಮೇಯದೀಪಿಕಾ ವ್ಯಾಖ್ಯಾನ, ಪುರುಷಸೂಕ್ತಾದಿ ಪಂಚಸೂಕ್ತವ್ಯಾಖ್ಯಾನ, ದಶಪ್ರಕರಣ ಟೀಕಾ ವ್ಯಾಖ್ಯಾನಾದ್ಯಾದಿ ದಿವ್ಯ ಗ್ರಂಥಗಳನ್ನು ರಚಿಸಿ ತಮ್ಮ ವಿದ್ವತ್ ಪ್ರಭೆಯಿಂದ ಅಶೇಷ ಜ್ಞಾನಿಗಳನ್ನೂ ಉದ್ಧರಿಸಿದ್ದಾರೆ.

ಇಂತಹ ಮಹಾಮಹಿಮರಾದ ರಾಘವೇಂದ್ರರು ಕೊನೆಯಲ್ಲಿ ತಮಗೆ ನೆಲಸಲು ಬೇಕಾದ ಶ್ರೀ ಮಂತ್ರಾಲಯ ಕ್ಷೇತ್ರವನ್ನು ತಮ್ಮ ಮಹಿಮೆಯಿಂದ ತಾವೇ ಪಡೆದರು, ಮುಂದೇ ಆ ಕ್ಷೇತ್ರಕ್ಕೆ ಬಂದಿದ್ದ ಭಾರಿ ಅವಗಡವನ್ನು ತಾವೇ ಪರಿಹಾರ ಮಾಡಿಕೊಂಡು, ಬಂದಿದ್ದ ಆಂಗ್ಲಾಧಿಕಾರಿ ಸರ್ ಥಾಮಸ್ ಮನ್ರೋ ಎಂಬುವನೊಡನೆ ತಾವೇ ವೃಂದಾವನದಿಂದ ಬಂದು ವ್ಯವಹರಿಸಿದರು. ಅಷ್ಟೇ ಅಲ್ಲ; ಇಂದು ಅವರ ಹೆಸರಲ್ಲಿ ನಡೆಯುತ್ತಿರುವ ಅನ್ನದಾನ ಹಾಗೂ ಸತ್ಯಮಾರ್ಗಾದಿಗಳು ಇಡೀ ಜಗತ್ತಿನಲ್ಲಿ ಇನ್ಯಾರಿಗೂ ನಡೆಯುತ್ತಿಲ್ಲ ಎನ್ನಬಹುದು. ಹೀಗೆ ರಾಯರು ತಮಗೆ ಬೇಕಾದ ಎಲ್ಲಾ ಸೌಕರ್ಯಗಳನ್ನೂ ತಾವೇ ಮಾಡಿಕೊಂಡಿದ್ದೂ ಅಲ್ಲದೇ ತಮ್ಮನ್ನು ಓಲೈಸುವ ಭಕ್ತರಿಗೆ ಬೇಕಾದ ಎಲ್ಲಾ ಸೌಕರ್ಯಗಳನ್ನೂ ತಾವೇ ಮಾಡಿಕೊಡುತ್ತಿದ್ದಾರೆ. ಹೀಗೆ ಭಕ್ತಾನುಗ್ರಹಾಕಾಂಕ್ಷಿಗಳಾದ ಗುರುರಾಜರಲ್ಲಿ ಎಲ್ಲರೂ ವಿಶೇಷ ಭಕ್ತಿಯನ್ನು ಮಾಡಿ ಅವರ ಅನುಗ್ರಹದಿಂದ ಸುಖಿಸಲಿ ಶ್ರೀವಿಠಲರು ಹೇಳಿದಂತೆ – "ರಾಘವೇಂದ್ರ ಗುರುರಾಯರ ಸೇವಿಸಿರೋ ಸೌಖ್ಯದಿ ಜೀವಿಸಿರೊ".

(19 ನೇ ಪುಟದಿಂದ)

ಶುದ್ಧಸಾತ್ವಿಕ ಹೃದಯದ ಮನವಿಯನ್ನು ಸ್ವಾಮಿ ತಿರಸ್ಕರಿಸುವುದಿಲ್ಲ– ಉದಾಸೀನಮಾಡುವುದಿಲ್ಲ. ಸಕಾಲದಲ್ಲಿ ವಿದರ್ಭನಗರಕ್ಕೆ ಬಂದು ರುಕ್ಮಿಣಿಯನ್ನು ತನ್ನ ರಥದಲ್ಲಿ ಕೂಡಿಸಿಕೊಂಡು ದ್ವಾರಕಾನಗರಕ್ಕೆ ಬರುತ್ತಾನೆ. ಅಲ್ಲಿ ಸಕಲ ವೈಭವದೊಡನೆ ರುಕ್ಮಿಣೀ ಕಲ್ಯಾಣ ಸಂಪನ್ನವಾಗುತ್ತದೆ.

ಕಾಳೀಯ ಮೌಳಿ ಮಣಿರಂಜಿತ ಪದಾಬ್ಜಾಯ
ಕಾಲಾಂಬುದ ಶ್ಯಾಮ ದಿವ್ಯತನವೇ
ಕಾರುಣ್ಯ ರಸವರ್ಷಿ ನಯನಾರವಿಂದಾಯ
ಕಲ್ಯಾಣ ಗುಣರತ್ನ ವಾರಿನಿಧಯೇ–ಜಯಮಂಗಳಂ ||

ಎಂದು ತನ್ನ ಗೀತನಾಟಕವನ್ನು ಪರಿಸಮಾಪ್ತಗೊಳಿಸಿರುವ ಋಷಿಕವಿ ನಾರಾಯಣತೀರ್ಥ ಕೊನೆಯಲ್ಲಿ ಹೇಳುತ್ತಾನೆ– ಶ್ರೀಕೃಷ್ಣನೆಂಬ ಮೇಘದಿಂದ ದ್ರವಿಸಿಬಂದ ಕರುಣಾಮೃತ ಧಾರೆ ನಾರಾಯಣತೀರ್ಥವೆಂಬ ಪರ್ವತದ ಮೇಲೆ ಬಿತ್ತಂತೆ. ಅಲ್ಲಿಂದ ಅದು ಆನಂದ ರಸಧಾರೆಯಾಗಿ ಹರಿಭಕ್ತ ಹೃದಯ ಕ್ಷೇತ್ರದಲ್ಲಿ ಪ್ರವಹಿಸಿತಂತೆ – ಈ ಕೃಷ್ಣಲೀಲಾತರಂಗಿಣಿಯಲ್ಲಿ ಮಿಂದವರು ಧನ್ಯರಾಗಿ ಮಾನ್ಯರಾಗಿ – ಕೃತಕೃತ್ಯರಾಗುತ್ತಾರಂತೆ. ಏಕೆ ಗೊತ್ತೇ !

ಈ ಪುಣ್ಯಕಥೆ—

ಕಾಮದಾ ಕಾಮಿನಾಂ
ಮುಮುಕ್ಷೂಣಾಂಚ ಮೋಕ್ಷದಾ
ಶೃಣ್ವತಾಂ ಗಾಯತಾಂ ಭಕ್ತ್ಯಾ
ಕೃಷ್ಣಲೀಲಾ ತರಂಗಿಣೀ ||

# ತಿರುಮಲೆ ತಿರುಪತಿಗಳಲ್ಲಿ ವಸತಿ ಸೌಲಭ್ಯ

## ತಿರುಮಲೆ

| | | |
|---|---|---|
| ವಿಶೇಷ ರೀತಿಯ ಕಾಟೇಜುಗಳು | ದಿನವೊಂದಕ್ಕೆ | ರೂ 75–00 |
| ಟಿ.ಬಿ.ಸಿ ಒಳಗಿನ ಕಾಟೇಜುಗಳು | ” | ರೂ 50–00 |
| ಎಸ್. ವಿ. ಅತಿಥಿಗೃಹ ತಿರುಮಲೆ | | |
| ಅ) ದೊಡ್ಡ ಕೋಣೆಗಳು | ,, | ರೂ 50–00 |
| ಆ) ಮೂಲೆಯ ಕೋಣೆಗಳು | ,, | ರೂ 40–00 |
| ಇ) ಕಿರಿಯ ಕೋಣೆಗಳು | ,, | ರೂ 35–00 |
| ಎಚ್. ಆರ್. ಜಿ. ಕಾಟೇಜು | ,, | ರೂ 150–00 |
| ಮದುವೆಯ ಹಾಲ್‌ಗಳು | | |
| ರೂಯಾ ಕಾಟೇಜು | ,, | ರೂ 80–00 |
| ಗೋಗಿನೇನಿ ಕಾಟೇಜು | ,, | ರೂ 80–00 |
| ಸಿ.ಸಿ. ಕಾಟೇಜು | ,, | ರೂ 100–00 |
| ಎಸ್.ಎಂ.ಸಿ. | ,, | ರೂ 50–00 |
| ಎ.ಟಿ.ಸಿ. ನಂ. | ,, | ರೂ 80–00 |
| ಶಂಖುಮಿಟ್ಟ ಕಾಟೇಜುಗಳು (ಪೂರ್ತಿ) | | ರೂ 20–00 |
| ಶೇಷಾದ್ರಿನಗರ ,, | ,, | ರೂ 20–00 |
| ಅಂಜನಾದ್ರಿನಗರ ,, | ,, | ರೂ 20–00 |
| ಗರುಡಾದ್ರಿನಗರ ,, | ,, | ರೂ 20–00 |

ವಿವರಗಳಿಗೆ: ರಿಸೆಪ್ಷನ್ ಆಫೀಸರ್, ಟಿ.ಟಿ.ಡಿ. ತಿರುಮಲೆ

## ತಿರುಪತಿ

| | | |
|---|---|---|
| ಶ್ರೀನಿವಾಸ ಸತ್ರ | ಎರಡು ಹಾಸಿಗೆಗಳ ಕೋಣೆ | ರೂ 20–00 |
| | ನಾಲ್ಕು ” | ರೂ 25–00 |
| | ಒಂದು ” | ರೂ 15–00 |
| ಶ್ರೀ ಪದ್ಮಾವತಿ ಅತಿಥಿಗೃಹ | | |
| | ಹವಾನಿಯಂತ್ರಿತ 2 ಹಾಸಿಗೆಗಳ ಕೋಣೆ | ರೂ 50–00 |
| ,, | ಒಂದು ಹಾಸಿಗೆಯ ಕೋಣೆ | ರೂ 30–00 |
| ಶ್ರೀ ವೆಂಕಟೇಶ್ವರ ಅತಿಥಿಗೃಹ | | |
| | ಎರಡು ಹಾಸಿಗೆಗಳ ಕೋಣೆ | ರೂ 20–00 |

ವಿವರಗಳಿಗೆ : ರಿಸೆಪ್ಷನ್ ಆಫೀಸರ್, ಟಿ.ಟಿ.ಡಿ. ತಿರುಪತಿ.

ತಿರುಮಲೆ–ತಿರುಪತಿಗಳಲ್ಲಿನ ವಸತಿಯನ್ನು ಕಾಯ್ದಿರಿಸಬಹುದು. ಆಯಾ ವಸತಿಸೌಕರ್ಯಕ್ಕೆ ಅನುಗುಣವಾದ ಹಣದ ಡಿ. ಡಿ. ಯನ್ನು ಕಳುಹಿಸುವಾಗ ಅಂಚೆ ವಿಳಾಸ ಹಾಗೂ ಅಪೇಕ್ಷಿತ ವಸತಿ ಸೌಕರ್ಯದ ವಿವರಗಳನ್ನು ಸ್ಪಷ್ಟವಾಗಿ ಇಂಗ್ಲೀಷಿನಲ್ಲಿ ಬರೆಯಿರಿ. ಅಪೇಕ್ಷಿತ ವಸತಿ ಸೌಕರ್ಯ ಲಭ್ಯವಿಲ್ಲದಾಗ ಇತರೆ ವಸತಿಯನ್ನು ಕಾಯ್ದಿರಿಸಿ ಹೆಚ್ಚಿನ ಹಣವನ್ನು ನೀವು ಇಲ್ಲಿ ಬಂದಾಗ ಹಿಂದಿರುಗಿಸಲಾಗುವುದು. ಕಾಯ್ದಿರಿಸಿದ ಬಗ್ಗೆ ಪತ್ರವನ್ನು ಕಳುಹಿಸಲಾಗುತ್ತದೆ, ಅದನ್ನು ತೆಗೆದುಕೊಂಡೇ ತಿರುಪತಿ; ತಿರುಮಲೆಗೆ ಬನ್ನಿರಿ. ಅಂಚೆಯಲ್ಲಿನ ವಿಳಂಬಕ್ಕೆ ತಿ.ತಿ.ದೇ. ಹೊಣೆಯಲ್ಲ. ಮೀಸಲಾತಿಯ ಹಕ್ಕು ತಿ.ತಿ.ದೇ. ಗಳದ್ದು. ಇಲ್ಲಿನ ದರಗಳು ಬದಲಾಯಿಸಲ್ಪಡಬಹುದು. ತಿರುಮಲೆ ತಿರುಪತಿ ದೇವಸ್ಥಾನಗಳು.

(14ನೇ ಪುಟದಿಂದ)

ರಾಮಾನುಜರು ಅವನನ್ನು ಮೇಲಕ್ಕೆತ್ತಿ "ಮಗೂ, ನಾಳೆ ಬೆಳಗ್ಗೆ ನಮ್ಮ ಮಠಕ್ಕೆ ಬಾ" ಎಂದು ಹೇಳಿದರು.

ಧನುರ್ದಾಸನು ಆ ರಾತ್ರಿ ಮಠದವರೆಗೂ ಬಂದು ರಾಮಾನುಜರನ್ನು ಬೀಳ್ಕೊಟ್ಟನು. ಅವನ ಮನಸ್ಸಿನಲ್ಲೆಲ್ಲಾ ಶ್ರೀರಂಗನಾಥನ ಚಿತ್ರವೇ ತುಂಬಿಕೊಂಡಿತ್ತು. ಆ ಕತ್ತಲಲ್ಲಿಯೂ ಅವನಿಗೆ ರಂಗನಾಥನ ಕಣ್ಣುಗಳಲ್ಲಿ ತುಂಬಿ ಹರಿಯುತ್ತಿದ್ದ ಬೆಳಕಿನ ಪ್ರವಾಹವೇ ಕಾಣುತ್ತಿತ್ತು.

೩

ಮಾರನೆಯ ದಿನ ಬೆಳಗ್ಗೆ ಧನುರ್ದಾಸನು ಅವಸರ ಅವಸರವಾಗಿ ಎದ್ದು ಸ್ನಾನ ಮಾಡಿದನು. ಒಗೆದು ಶುಚಿಮಾಡಿದ ಬಟ್ಟೆಗಳನ್ನು ತೊಟ್ಟುಕೊಂಡನು. ಕನಕಾಂಬೆಯನ್ನು ಕರೆದು "ಈಗ ನಾನು ಶ್ರೀ ರಾಮಾನುಜಾಚಾರ್ಯರ ದರ್ಶನಕ್ಕೆ ಹೋಗುತ್ತಿದ್ದೇನೆ. ವಾಪಸು ಬರಲು ತಡವಾಗಬಹುದು. ನನಗಾಗಿ ಕಾಯಬೇಡ ಊಟ ಮಾಡಿಬಿಡು" ಎಂದು ಹೇಳಿದನು. ಆಕೆಯ ಉತ್ತರಕ್ಕೂ ಕಾಯದೆ ಮಠಕ್ಕೆ ಓಡುತ್ತಾ ಸಾಗಿದನು.

ಜಟ್ಟಿ ಧನುರ್ದಾಸನು ಬಂದರೆ ಅವನನ್ನು ತಮ್ಮ ಹತ್ತಿರ ಕರೆದುಕೊಂಡು ಬರಬೇಕೆಂದು ರಾಮಾನುಜರು ತಮ್ಮ ಶಿಷ್ಯರಿಗೆ ಮೊದಲೇ ತಿಳಿಸಿದ್ದರು. ಆದೇಶಪ್ರಕಾರ ಧನುರ್ದಾಸನನ್ನು ಶಿಷ್ಯರು ರಾಮಾನುಜರ ಹತ್ತಿರ ಕರೆದುಕೊಂಡು ಹೋದರು. ಅವನು ನೆಲದ ಮೇಲ ಮಲಗಿ ಅವರಿಗೆ ನಮಸ್ಕಾರ ಮಾಡಿದನು. "ಬಾ ಮಗೂ ಕುಳಿತುಕೊ" ಎಂದು ಅವರು ವಾತ್ಸಲ್ಯದಿಂದ ನುಡಿದರು. ತಮ್ಮ ಹತ್ತಿರದಲ್ಲಿಯೇ ಕುಳ್ಳಿರಿಸಿಕೊಂಡರು. ಭಗವಂತನ ಹಿರಿಮೆಯನ್ನವನಿಗೆ ಬೋಧಿಸಿದರು. "ಅಪ್ಪ, ಈ ಪ್ರಪಂಚದಲ್ಲಿ ನಮಗೆ ಕಾಣುತ್ತಿರುವ ಕಾಣಿಸದೇ ಇರುವ ಎಲ್ಲವೂ ಭಗವಂತನ ಸೃಷ್ಟಿ. ಆತನೇ ಎಲ್ಲವನ್ನೂ ಪೋಷಿಸುತ್ತಾನೆ. ರಕ್ಷಿಸುತ್ತಾನೆ. ಕೊನೆಗೆ ಎಲ್ಲವನ್ನು ಆತನೇ ನಾಶಮಾಡುತ್ತಾನೆ. ಆದುದರಿಂದ ಎಲ್ಲರೂ ಭಗವಂತನನ್ನೇ ಆಶ್ರಯಿಸಬೇಕು. ಆತನನ್ನೇ ಭಕ್ತಿಯಿಂದ ಬೇಡಿಕೊಳ್ಳಬೇಕು. ಭಗವಂತನ ಭಕ್ತರ ಸೇವೆಮಾಡಿದರೆ ಭಗವಂತನ ಸೇವೆ ಮಾಡಿದಂತೆಯೇ ಆಗುತ್ತದೆ" ಎಂದು ಧನುರ್ದಾಸನಿಗೆ ಉಪದೇಶ ನೀಡಿದರು. ಆತನಿಗೆ ಶ್ರೀ ವೈಷ್ಣವ ದೀಕ್ಷೆಯನ್ನು ಕೊಟ್ಟರು. ಧನುರ್ದಾಸನು ವಿನಯದಿಂದ ತಲೆ ಬಾಗಿಸಿ ಕೈ ಜೋಡಿಸಿ "ಸ್ವಾಮಿ, ಇನ್ನು ಮೇಲೆ ನಾನು ತಮ್ಮ ಸೇವೆಯಲ್ಲೇ ಇರಲು ನನಗೆ ಅನುಮತಿ ಕೊಡಿ" ಎಂದು ಪ್ರಾರ್ಥಿಸಿಕೊಂಡನು. ರಾಮಾನುಜರು "ಆಗಲಿ ಮಗು. ನೀನು ಇನ್ನು ಮೇಲೆ ನಮ್ಮ ಮಠದಲ್ಲಿಯೇ ಇದ್ದು ಕೆಲಸ ಮಾಡಿಕೊಂಡಿರು" ಎಂದು ಅಪ್ಪಣೆ ಮಾಡಿದರು. ಧನುರ್ದಾಸನು ಅಂದಿನಿಂದಲೇ ತನ್ನ ಕೆಲಸವನ್ನು ಪ್ರಾರಂಭಿಸಿದನು.

ರಾತ್ರಿ ಹೊತ್ತಾಗಿ ಮನೆಗೆ ಬಂದ ಧನುರ್ದಾಸನನ್ನು ಕಂಡು ಕನಕಾಂಬೆಯು "ಬೆಳಗಿನಿಂದ ಎಲ್ಲಿ ಹೋಗಿದ್ದಿರಿ? ತೊಟ್ಟು ನೀರನ್ನೂ ಕುಡಿಯದೆ ತುತ್ತು ಅನ್ನವನ್ನೂ ತಿನ್ನದೆ ಉಪವಾಸದಿಂದಿರುವರಲ್ಲ" ಎಂದು ಪ್ರೀತಿಯಿಂದ ಕೇಳಿದಳು. ಆಗ ಧನುರ್ದಾಸನು ಹಿಂದಿನ ದಿನ ನಡೆದುದನ್ನೆಲ್ಲ ವಿವರವಾಗಿ ಆಕೆಗೆ ಹೇಳಿದನು. ಆದಿನ ಬೆಳಗ್ಗೆ ರಾಮಾನುಜರು ಉಪದೇಶವನ್ನು ನೀಡಿದುದನ್ನು ತಿಳಿಸಿದನು. ಕನಕಾಂಬೆಯು ರಾಮಾನುಜರ ಹೆಸರನ್ನು ಕೇಳಿದ್ದಳು. ತನ್ನ ಪ್ರಿಯನಿಗೆ ಅವರಿಂದ ಉಪದೇಶ ದೊರಕಿದುದನ್ನು ಕೇಳಿ ಸಂತೋಷಪಟ್ಟಳು. ತನ್ನನ್ನೂ ಕರೆದುಕೊಂಡು ಹೋಗಿ ರಾಮಾನುಜರ ದರ್ಶನ ಮಾಡಿಸಬೇಕೆಂದು ಗೋಗರೆದಳು. ಧನುರ್ದಾಸನಿಗೇಕೊ ಭಯ. ಕನಕಾಂಬೆ ಆತನು ಮದುವೆಮಾಡಿಕೊಂಡ ಸತಿಯಲ್ಲ. ಇದನ್ನು ತಿಳಿದು ರಾಮಾನುಜರು ಏನೆನ್ನುವರೊ ಎಂದು ಭೀತಿ. ಆದರೆ ಕನಕಾಂಬೆಯ ಒತ್ತಾಯಕ್ಕೆ ಒಪ್ಪಲೇಬೇಕಾಯಿತು.

ಮಾರನೆಯ ದಿನ ಬೆಳಗ್ಗೆ ಧನುರ್ದಾಸ ಕನಕಾಂಬೆಯನ್ನು ಕರೆದುಕೊಂಡು ಮಠಕ್ಕೆ ಬಂದನು. ರಾಮಾನುಜರ ದರ್ಶನ ಮಾಡಿದನು. ಕನಕಾಂಬೆಯ ಕೋರಿಕೆಯನ್ನು ಅವರಲ್ಲಿ ಬಿನ್ನಹ ಮಾಡಿದನು. ರಾಮಾನಜರು "ಅಪ್ಪ, ಆಕೆಯನ್ನು ಒಳಗೆ ಕರೆದುಕೊಂಡು ಬಾ" ಎಂದು ಹೇಳಿದರು. ಕನಕಾಂಬೆಗೂ ಉಪದೇಶಕೊಟ್ಟರು. ಆಕೆಯನ್ನು ಶ್ರೀ ವೈಷ್ಣವ ಮತಕ್ಕೆ ಸೇರಿಸಿಕೊಂಡರು. ಅನಂತರ "ಮಕ್ಕಳೇ, ಇಂದಿನಿಂದ ನೀವಿಬ್ಬರೂ ಗಂಡ ಹೆಂಡತಿಯಾಗಿರಿ. ಸತ್ಯಧರ್ಮವನ್ನು ಅನುಸರಿಸಿರಿ" ಎಂದು ಆಶೀರ್ವದಿಸಿದರು. ಇಬ್ಬರಿಗೂ ಒಟ್ಟಿಗೇ ಪ್ರಸಾದ ಕೊಟ್ಟರು.

ಆ ದಿನದಿಂದ ಧನುರ್ದಾಸ ಮಠದಲ್ಲಿ ಸ್ವಯಂ ಸೇವಕನಾದನು. ಮಠದ ತೋಟದಲ್ಲಿ ಕೆಲಸ ಮಾಡುವುದು, ಗಿಡ ಬಳ್ಳಿಗಳಿಗೆ ನೀರುಣಿಸುವುದು, ಹೂ ಪತ್ರೆಗಳನ್ನು ಬಿಡಿಸುವುದು ಇವು ಅವನ ನಿತ್ಯದ ಕೆಲಸಗಳಾದವು. ರಾಮಾನುಜರ ಆಪ್ತ ಸೇವಕನಾಗಿಯೂ ಆತನು ಕೆಲಸ ಮಾಡುತ್ತಿದ್ದನು. ರಾಮಾನುಜರ ಕಾಲೊತ್ತುವುದು, ಗಾಳಿ ಹಾಕುವುದು, ಅವರು ಹೊರಗೆ ಹೊರಟಾಗ ಅಂಗರಕ್ಷಕನಾಗಿರುವುದು—ಇವೆಲ್ಲ ಅವನಿಗೆ ಪ್ರಿಯವಾದ ಕೆಲಸಗಳು. ಕನಕಾಂಬೆಯು ಮಠವನ್ನು ಗುಡಿಸಿ, ಸಾರಿಸಿ, ಸ್ವಚ್ಛ ಮಾಡುವುದು, ರಂಗವಲ್ಲಿ ಹಾಕುವುದು, ಪಾತ್ರೆಗಳನ್ನು ತೊಳೆದುಕೊಡುವುದು ಮುಂತಾದ ಕೆಲಸಗಳನ್ನು ಮಾಡುತ್ತಿದ್ದಳು. ಇವಲ್ಲದೆ ರಾಮಾನುಜರ ಪ್ರಿಯಶಿಷ್ಯನಾಗಿದ್ದ ಕೂರೇಶನ ಮನೆಯಲ್ಲಿಯೂ ಕನಕಾಂಬೆಯು ಕೆಲಸಮಾಡಿಕೊಡುತ್ತಿದ್ದಳು. ಕೂರೇಶನ ಮಕ್ಕಳನ್ನು ನೋಡಿಕೊಳ್ಳುವುದರಲ್ಲಿಯೂ ನಿರತಳಾಗಿದ್ದಳು.

ಈ ಇಬ್ಬರೂ ಆದರ್ಶ ಸೇವಕರು. ಇವರು ಗುರುವಿಗೆ ಮಾಡುತ್ತಿದ್ದ ಸೇವೆಯನ್ನು ದೇವರ ಪೂಜೆಯೆಂದೇ ಭಾವಿಸಿದರು. ಇಬ್ಬರೂ ಸೂರ್ಯೋದಯಕ್ಕೆ ಮುಂಚೆ ಏಳುವರು. ಸ್ನಾನಾದಿಗಳನ್ನು ಮುಗಿಸಿಕೊಂಡು ಗುರುಸೇವೆಗೆಂದು ಬರುವರು. ರಾತ್ರಿ ರಾಮಾನುಜರು ಮಲಗುವವರೆಗೂ ಧನುರ್ದಾಸನು ಮಠದಲ್ಲಿಯೇ ಇರುತ್ತಿದ್ದನು. ಎಲ್ಲ ಕೆಲಸಗಳನ್ನೂ ಮುಗಿಸಿ ರಾಮಾನುಜರ ಅಪ್ಪಣೆ ಪಡೆದು ಮನೆಗೆ ಹಿಂದಿರುಗುತ್ತಿದ್ದನು. ಕನಕಾಂಬೆಯೂ ಅಷ್ಟೆ. ಮಠದ ಕೆಲಸಗಳನ್ನೆಲ್ಲಾ ಮುಗಿಸಿ ಕೂರೇಶನ ಮನೆಗೆ ಬರುತ್ತಿದ್ದಳು. ಅಲ್ಲಿನ ಕೆಲಸಗಳನ್ನು ಮಾಡಿ ಆತನ ಪುಟ್ಟ ಮಕ್ಕಳನ್ನು ಮಲಗಿಸಿ ಅನಂತರ ಮನೆಗೆ ಹಿಂದಿರುಗುತ್ತಿದ್ದಳು. ಇವರ ಗುರುಸೇವೆ ಊರಿನ ಜನಕ್ಕೆಲ್ಲಾ ಆದರ್ಶವಾಯಿತು.

ರಾಮಾನುಜರು ಧನುರ್ದಾಸನನ್ನು ಮೆಚ್ಚಿಕೊಂಡು ಆಗಾಗ ಮಾತನಾಡುತ್ತಿದ್ದರು. ಇತರ ಶಿಷ್ಯರಿಗೆ "ನೀವು ಧನುರ್ದಾಸನ ಹಾಗೆ ಕೆಲಸ ಮಾಡುವುದನ್ನು ಕಲಿಯಬೇಕು. ಮಾಡುವ ಕೆಲಸದಲ್ಲಿ ಪ್ರೀತಿಯಿರಬೇಕು, ಆಸಕ್ತಿಯಿರಬೇಕು. ಆಲಸ್ಯ ಮಾಡಬಾರದು. ಯಾವ ಕೆಲಸವನ್ನೇ ಆಗಲಿ ಅಚ್ಚುಕಟ್ಟಾಗಿ ಮಾಡಬೇಕು. ನಿಮಗೆಲ್ಲ ಮೇಲ್ಪಂಕ್ತಿಯಾಗಿ ಧನುರ್ದಾಸನಿದ್ದಾನೆ. ನೀವೂ ಅವನಂತೆಯೇ ಆಗಬೇಕು." ಎಂದು ಬುದ್ಧಿವಾದ ಹೇಳುತ್ತಿದ್ದರು. ಕೆಲವರು ಇದನ್ನು ಒಪ್ಪಿ ಹಾಗೆಯೇ ನಡೆಯುತ್ತಿದ್ದರು. ಇನ್ನು ಕೆಲವರು "ನಮ್ಮ ಗುರುಗಳು ಇವನನ್ನು ಹೊಗಳಿ ಹೊಗಳಿ ಅಟ್ಟಕ್ಕೇರಿಸುತ್ತಿದ್ದಾರಲ್ಲ" ಎಂದು ಗೊಣಗಿಕೊಳ್ಳುತ್ತಿದ್ದರು.

ಧನುರ್ದಾಸನು ರಾಮಾನುಜರನ್ನು ದೇವರೆಂದೇ ಭಾವಿಸಿದ್ದನು. ಹಾಗಿಯೇ ನಡೆದುಕೊಳ್ಳುತ್ತಿದ್ದನು. ಧನುರ್ದಾಸನ ಪ್ರಾಮಾಣಿಕತೆ, ಶುದ್ಧವಾದ ಮನಸ್ಸು, ಮೃದುವಾದ ಮಾತುಗಳು, ಒಳ್ಳೆಯ ನಡತೆ ಇವುಗಳನ್ನು ರಾಮಾನುಜರು ತುಂಬಾ ಮೆಚ್ಚಿಕೊಂಡರು. ಮೊದಲು ಅಂಗರಕ್ಷಕ

ನಾಗಿ ದೂರದಲ್ಲಿ ಹೋಗುತ್ತಿದ್ದ ಧನುರ್ದಾಸನನ್ನು ಈಗ ತಮ್ಮ ಹತ್ತಿರದಲ್ಲಿಯೇ ಕರೆದುಕೊಂಡು ಹೋಗುತ್ತಿದ್ದರು.

ರಾಮಾನುಜರಿಗೆ ತುಂಬಾ ವಯಸ್ಸಾಗಿದ್ದುದರಿಂದ ಅವರು ನಡೆದುಕೊಂಡು ಹೋಗುವಾಗ ಶಿಷ್ಯರ ಭುಜದ ಮೇಲೆ ಕೈಯಿಟ್ಟುಕೊಂಡು ಹೋಗುತ್ತಿದ್ದರು. ಒಮ್ಮೊಮ್ಮೆ ನದಿಗೆ ಸ್ನಾನಕ್ಕೆ ಹೋಗುವಾಗ ಶಿಷ್ಯ ದಾಶರಥಿಯ ಹೆಗಲ ಮೇಲೆಯೊ, ಕೂರೇಶನ ಹೆಗಲ ಮೇಲೆಯೊ ಕೈಯಿಟ್ಟು ಹೋಗುತ್ತಿದ್ದರು. ನದಿಯಲ್ಲಿ ಸ್ನಾನವಾದ ನಂತರ ಹಿಂದಿರುಗುವಾಗ ಧನುರ್ದಾಸನ ಹೆಗಲ ಮೇಲೆ ಕೈಯನ್ನಿಟ್ಟುಕೊಂಡು ಆತನ ಆಸರೆಯೊಡನೆ ದೇವಾಲಯಕ್ಕೆ ಹೋಗುತ್ತಿದ್ದರು. ಹೀಗೆ ಅನೇಕಸಲ ನಡೆಯುತ್ತಿತ್ತು. ಕೆಲವರು ಶಿಷ್ಯರಿಗೆ ಇದರಿಂದ ಅಸಮಾಧಾನವಾಯಿತು. "ಏನಿದು ಅನ್ಯಾಯ? ಸ್ನಾನಕ್ಕೆ ಹೋಗುವಾಗ ಬ್ರಾಹ್ಮಣರ ಹೆಗಲ ಮೇಲೆ ಕೈಯಿಟ್ಟುಕೊಂಡು ಹೋಗುತ್ತಾರೆ. ಸ್ನಾನವಾದ ಮೇಲೆ ಶೂದ್ರನ ಹೆಗಲ ಮೇಲೆ ಕೈಯಿಟ್ಟು ಬರುತ್ತಾರೆ. ನಾವು ಬ್ರಾಹ್ಮಣರು ಶೂದ್ರರಿಗಿಂತ ಕೀಳಾಗಿಬಿಟ್ಟೆವೇನು? ಎಂದು ಮಾತನಾಡಿಕೊಳ್ಳುತ್ತಿದ್ದರು.

ಈ ಮಾತುಗಳು ರಾಮಾನುಜರ ಕಿವಿಯ ಮೇಲೂ ಬಿದ್ದವು. ಅವರು ಸುಮ್ಮನಿದ್ದರು. ಮಾತನಾಡಲಿಲ್ಲ, ಆದರೆ ತಮ್ಮ ಅಭ್ಯಾಸವನ್ನು ಮಾತ್ರ ನಿಲ್ಲಿಸಲಿಲ್ಲ. ಕಾವೇರಿ ಸ್ನಾನದ ನಂತರ ಧನುರ್ದಾಸನ ಭುಜದ ಆಸರೆಯನ್ನು ಪಡೆದೇ ಬರುತ್ತಿದ್ದರು.

ಒಂದು ದಿನ ರಾತ್ರಿ ಶಿಷ್ಯರೆಲ್ಲರೂ ಮಲಗಿಕೊಂಡಿದ್ದರು. ರಾಮಾನುಜರು ಮೆಲ್ಲಗೆ ಹೋಗಿ ಅವರು ಒಗೆದು ಒಣಗಿಹಾಕಿದ್ದ ಪಂಚೆಗಳಲ್ಲಿ ಸ್ವಲ್ಪಭಾಗವನ್ನು ಹರಿದುಬಿಟ್ಟರು. ಅನಂತರ ತಮ್ಮ ಕೊಠಡಿಗೆ ಬಂದು ಮಲಗಿಕೊಂಡರು. ಮಾರನೆಯ ಬೆಳಗ್ಗೆ ಸ್ನಾನಮಾಡಿದ ನಂತರ ಮಡಿಬಟ್ಟೆಯನ್ನುಡಲು ಶಿಷ್ಯರು ಬಂದಾಗ ಗದ್ದಲವಾಯಿತು. ಪ್ರತಿಯೊಬ್ಬನ ಪಂಚೆಯೂ ಹರಿದಿತ್ತು. ಪಂಚೆಯನ್ನು ಹರಿದವನು "ನೀನು ನೀನೆಂದು" ಒಬ್ಬರನ್ನೊಬ್ಬರು ದೂಷಿಸಿದರು. ಆ ವೇಳೆಗೆ ರಾಮಾನುಜರು ಅಲ್ಲಿಗೆ ಬಂದು "ಯಾಕಪ್ಪಾ ಇಷ್ಟು ಗದ್ದಲ? ಕೆಟ್ಟ ಮಾತುಗಳನ್ನಾಡುತ್ತಿದ್ದೀರಿ? ಬ್ರಾಹ್ಮಣರ ಬಾಯಲ್ಲಿ ಬರಬಾರದ ಮಾತುಗಳನ್ನೆಲ್ಲಾ ಆಡಿಬಿಟ್ಟಿರಲ್ಲಾ?" ಎಂದು ಕೇಳಿದರು.

"ನೋಡಿ ಗುರುಗಳೇ ಇವರಲ್ಲಿ ಯಾವನೊ ಅಯೋಗ್ಯ ನನ್ನ ಪಂಚೆಯನ್ನು ಹರಿದಿದ್ದಾನೆ" ಒಬ್ಬ ಎಂದನು. ಪ್ರತಿಯೊಬ್ಬನೂ ಹೀಗೆಯೇ ಇನ್ನೊಬ್ಬನ ಮೇಲೆ ದೋಷವನ್ನು ಹೊರಿಸಿದನು. ರಾಮಾನುಜರು ಎಲ್ಲರ ಮಾತುಗಳನ್ನು ಕೇಳಿದರು. "ಇಷ್ಟೇ ತಾನೆ? ನಿಮಗೆಲ್ಲ ಹೊಸ ಪಂಚೆ ಕೊಡಿಸೋಣ, ಜಗಳವಾಡಬೇಡಿ ಸುಮ್ಮನಾಗಿರಿ" ಎಂದರು. ಜಗಳ ನಿಂತಿತು. ಆದರೂ ಶಿಷ್ಯರ ತಮ್ಮ ತಮ್ಮಲ್ಲಿ ಕಚ್ಚಾಡುತ್ತಿದ್ದರು.

ಎರಡು ದಿನಗಳ ನಂತರ ಒಂದು ರಾತ್ರಿ ರಾಮಾನುಜರು ಈ ಶಿಷ್ಯರನ್ನೆಲ್ಲ ಕರೆದರು. "ಈ ರಾತ್ರಿ ನೀವು ಒಂದು ಕೆಲಸ ಮಾಡಬೇಕು. ಧನುರ್ದಾಸನು ಇಲ್ಲಿಯೇ ಬಹಳ ಹೊತ್ತು ಇರುತ್ತಾನೆ. ನೀವೆಲ್ಲಾ ಅವನ ಮನೆಗೆ ಹೋಗಿ.

---

ಅಲ್ಲಿರುವ ನವರತ್ನದ ಆಭರಣಗಳನ್ನು ಅವನ ಮಲಗಿರುವ ಹೆಂಡತಿಗೆ ಎಚ್ಚರವಾಗದಂತೆ ಉಪಾಯವಾಗಿ ಅವುಗಳನ್ನು ತೆಗೆದುಕೊಂಡು ಬನ್ನಿ. ನಿಮಗೆಲ್ಲ ಬಹುಮಾನ ಕೊಡಿಸುತ್ತೇನೆ." ಎಂದರು. ಒಬ್ಬ ಶಿಷ್ಯ ಕೇಳಿದನು, "ಅಷ್ಟರಲ್ಲಿ ಧನುರ್ದಾಸನು ಬಂದು ಬಿಟ್ಟರೆ ಏನು ಗತಿ?" ಅದಕ್ಕೆ ರಾಮಾನುಜರು "ನೀವು ಕಳವುಮಾಡಿಕೊಂಡು ಮಠಕ್ಕೆ ಬನ್ನಿ. ಅನಂತರ ಧನುರ್ದಾಸನನ್ನು ಮನೆಗೆ ಕಳಿಸುತ್ತೇನೆ" ಎಂದರು. ಶಿಷ್ಯರು ಒಪ್ಪಿಕೊಂಡು ಕಳ್ಳತನಕ್ಕೆ ಹೊರಟರು.

ಧನುರ್ದಾಸನ ಮನೆಯ ಹತ್ತಿರ ಅವರೆಲ್ಲ ಬಂದರು. ಬಾಗಿಲಿಗೆ ಚಿಲಕ ಹಾಕಿರಲಿಲ್ಲ. ಬೆಕ್ಕುಗಳಂತೆ ಸದ್ದಿಲ್ಲದೆ ಒಳಕ್ಕೆ ನುಗ್ಗಿದರು. ಕನಕಾಂಬೆ ಚಾಪೆಯ ಮೇಲೆ ಮಲಗಿದ್ದಳು. ಅವಳಿಗೆ ಹಾಗೆಯೇ ನಿದ್ರೆ ಬಂದಿತ್ತು. ಶಿಷ್ಯರು ಮೆಲ್ಲನೆ ಅವಳ ಬಳಿ ಹೋದರು. ಅವಳ ಜಡೆಯಲ್ಲಿದ್ದ ನಾಗರ, ಜಡೆಬಿಲ್ಲೆ, ಕಿವಿಯಲ್ಲಿದ್ದ ವಜ್ರದೋಲೆ, ಕೈಯಲ್ಲಿದ್ದ ಉಂಗುರ, ಬಳೆಗಳು, ತೋಳ್ಬಂದಿ, ಕಾಲ್ಗಡಗೆ ಮುಂತಾದುವನ್ನೆಲ್ಲಾ ಬಿಚ್ಚಿಕೊಂಡರು. ಕೊರಳಲ್ಲಿದ್ದ ಮುತ್ತಿನ ಸರವನ್ನು ತೆಗೆದುಕೊಂಡರು. ಬಲಮಗ್ಗುಲಲ್ಲಿ ಮಲಗಿದ್ದ ಕನಕಾಂಬೆ ಈಗ ಮೆಲ್ಲನೆ ಎಡ ಪಕ್ಕಕ್ಕೆ ಹೊರಳಿದಳು. ಶಿಷ್ಯರಿಗೆ ಗಾಬರಿಯಾಯಿತು. ಎದ್ದು ಎಲ್ಲಿ ಕೂಗಿಕೊಳ್ಳುವಳೋ ಎಂದು ಭಯವಾಯಿತು. ಕೂಡಲೇ ಅವರು ಅಲ್ಲಿಂದ ಓಡಿಬಿಟ್ಟರು.

ಶಿಷ್ಯರು ಮಠಕ್ಕೆ ಬಂದು ರಾಮಾನುಜರ ಮುಂದೆ ನಿಂತರು. ಧನುರ್ದಾಸನು ಗುರುಗಳಿಗೆ ಗಾಳಿ ಹಾಕುತ್ತ ಅಲ್ಲಿಯೇ ಕುಳಿತಿದ್ದನು. ರಾಮಾನುಜರು "ಅಪ್ಪ, ಧನುರ್ದಾಸ, ಈಗಾಗಲೇ ಮಧ್ಯರಾತ್ರಿಯಾಗಿದೆ, ಕನಕಾಂಬೆ ಇನ್ನೂ ಚಿಕ್ಕವಳು. ಒಬ್ಬಳೇ ಇರುತ್ತಾಳೆ. ನೀನು ಮನೆಗೆ ಹೋಗು. ಇವರು ಯಾರಾದರೂ ಸೇವೆ ಮಾಡುತ್ತಾರೆ." ಎಂದು ಹೇಳಿದರು. ಧನುರ್ದಾಸನು ಬಿಡಲಾರದ ಮನಸ್ಸಿನಿಂದ ಮನೆಗೆ ಹೊರಟನು. ಗುರುಗಳು ಶಿಷ್ಯರನ್ನು ಕೇಳಿದರು, "ಏನಪ್ಪ ಹೋದ ಕೆಲಸವಾಯಿತೆ?". "ಆಯಿತು ಗುರುಗಳೇ ನೋಡಿ ಇಷ್ಟೊಂದು ಪದಾರ್ಥ ಸಿಕ್ಕಿತು" ಎಂದು ತಾವು ತಂದಿದ್ದ ಒಡವೆಗಳನ್ನು ಅವರ ಮುಂದೆ ರಾಶಿ ಹಾಕಿದರು. ತಮ್ಮ ಕಳ್ಳತನವನ್ನು ಹುಮ್ಮಸ್ಸಿನಿಂದ ವಿವರಿಸಲು ಆರಂಭಿಸಿದರು. ರಾಮಾನುಜರು "ಆಗಲಿ, ಅದನ್ನೆಲ್ಲಾ ಆ ಮೇಲೆ ಹೇಳುವಿರಂತೆ. ಈಗ ನೀವು ಧನುರ್ದಾಸನ ಹಿಂದೆಯೇ ಅವರ ಮನೆಗೆ ಹೋಗಿ. ನೀವು ಹೋಗುತ್ತಿರುವುದು ಅವನಿಗೆ ತಿಳಿಯಬಾರದು. ಅವರ ಮನೆಯಲ್ಲಿ ಗಂಡ ಹೆಂಡತಿಗೆ ನಡೆಯುವ ಮಾತುಗಳನ್ನು ಕೇಳಿಕೊಂಡು ಬನ್ನಿ" ಎಂದರು. ಶಿಷ್ಯರು ಮತ್ತೆ ಧನುರ್ದಾಸನ ಮನೆಯ ಕಡೆ ಹೊರಟರು.

ಧನುರ್ದಾಸ ಮನೆಗೆ ಬಂದು ಬಾಗಿಲು ತಳ್ಳಿದನು. ಅದು ತೆರೆದುಕೊಂಡಿತು. ಎಣ್ಣೆಯ ದೀಪ ಸಣ್ಣಗೆ ಉರಿಯುತ್ತಿತ್ತು "ಕನಕಾ" ಎಂದು ಕರೆಯುತ್ತ ಆತ ಒಳಗೆ ಬಂದನು. ಕನಕಾಂಬೆ "ಬಂದೇ" ಎಂದು ಹೇಳುತ್ತ ಎದ್ದಳು. ದೀಪದ ಕುಡಿಯನ್ನು ಮುಂದಕ್ಕೆ ಮೀಟಿದಳು. ಬೆಳಕು ಸುತ್ತಲೂ ಹರಡಿತು. ಧನುರ್ದಾಸ ಹೆಂಡತಿಯನ್ನು ನೋಡಿದನು. ಅವಳ ಒಂದು ಪಕ್ಕದಲ್ಲಿದ್ದ ಆಭರಣಗಳೆಲ್ಲವೂ ಮಾಯವಾಗಿದ್ದವು. "ಕನಕಾ, ಏನಿದು? ನಿನ್ನ ಒಂದು ಭಾಗದಲ್ಲಿ ಒಡವೆಗಳೇ ಕಾಣುತ್ತಿಲ್ಲವಲ್ಲ ? ಎಂದು ವಿಸ್ಮಯದಿಂದ ಕೇಳಿದನು. ಕನಕಾಂಬೆಯು "ನಾನು ಚಾಪೆಯ ಮೇಲೆ ಮಲಗಿದ್ದೆ, ಕೆಲವು ಜನ ವೈಷ್ಣವರು ಬಂದರು. ಒಂದು ಕಡೆ ಇದ್ದ ಒಡವೆಗಳನ್ನೆಲ್ಲ ಬಿಡಿಸಿಕೊಂಡರು. ಇನ್ನೊಂದು ಕಡೆ ಇರುವ ಆಭರಣಗಳನ್ನು ಕಳಚಿಕೊಳ್ಳಲಿ ಎಂದು ನಾನು ಪಕ್ಕಕ್ಕೆ ಹೊರಳಿದೆ. ಪಾಪ! ಅವರು ಹೆದರಿಕೊಂಡು ಓಡಿಹೋದರು" ಎಂದು ಖಿನ್ನಳಾಗಿ ಹೇಳಿದಳು.

"ಎಂತಹ ಕೆಲಸ ಮಾಡಿದೆ ಕನಕ? ನೀನು ಹಾಗೆಯೇ ಬಿದ್ದಿರಬಾರದಿತ್ತೆ ? ಪಾಪ ಅವರೆಷ್ಟು ಆಸೆಯಿಂದ ಬಂದಿದ್ದರೋ ಏನೊ ? ಇವುಗಳನ್ನು ಅವರು ಕೊಂಡೊಯ್ದಿದ್ದರೆ ದೇವರಿಗೆ ಪ್ರೀತಿಯಾಗುತ್ತಿತ್ತು" ಎಂದು ಧನುರ್ದಾಸ ಕೊರಗಿದ.

"ನನಗೆ ಅಷ್ಟು ಗೊತ್ತಾಗಲಿಲ್ಲ" ಎಂದು ಕನಕಾಂಬೆ ಪಶ್ಚಾತ್ತಾಪದಿಂದ ನುಡಿದಳು. ತಮ್ಮ ಒಡವೆಗಳು ಆ ವೈಷ್ಣವರಿಗೆ ಸೇರಲಿಲ್ಲವಲ್ಲ" ಎಂದು ಇಬ್ಬರೂ ಬಹಳಹೊತ್ತು ಮಾತನಾಡಿಕೊಳ್ಳುತ್ತಿದ್ದರು. ಪಶ್ಚಾತ್ತಾಪ ಪಡುತ್ತಲೇ ಇದ್ದರು.

ರಾಮಾನುಜರ ಶಿಷ್ಯರು ಬಹುಕಾಲ ಈ ಗಂಡ ಹೆಂಡತಿಯ ಮಾತನ್ನು ಕೇಳುತ್ತಾ ಹೊರಗೆ ನಿಂತಿದ್ದರು. ಅನಂತರ ನಿಧಾನವಾಗಿ ಮಠಕ್ಕೆ ಹಿಂತಿರುಗಿದರು. ರಾಮಾನುಜರು ಇನ್ನೂ ಎದ್ದೇ ಇದ್ದರು ಶಿಷ್ಯರೆಲ್ಲ ಹೋಗಿ ಅವರ ಮುಂದೆ ನಿಂತರು.

"ಏನಪ್ಪ ಧನುರ್ದಾಸನ ಮನೆಗೆ ಹೋಗಿದ್ದಿರಾ?" ಎಂದು ಗುರುಗಳು ಕೇಳಿದರು. "ಹೋಗಿದ್ದೆವು ಗುರುಗಳೆ" ಎಂದು ಶಿಷ್ಯರು ತಲೆತಗ್ಗಿಸಿ ನುಡಿದರು.

"ಒಡವೆಗಳು ಹೋದುದಕ್ಕೆ ಅವರು ತುಂಬಾ ದುಃಖಪಟ್ಟರೆ ?"

"ಇಲ್ಲ".

"ದುಃಖಪಡಲಿಲ್ಲವೆ ? ಧನುರ್ದಾಸ ಹೆಂಡತಿಯನ್ನು ಬೈಯಲಿಲ್ಲವೆ?".

"ಇಲ್ಲ, ಕನಕಾಂಬೆಯಾಗಲೀ ಧನುರ್ದಾಸನಾಗಲೀ ಒಡವೆಗಳು ಕಳುವಾದುದಕ್ಕೆ ಸ್ವಲ್ಪವೂ ದುಃಖಿಸಲಿಲ್ಲ. ಉಳಿದ ಒಡವೆಗಳನ್ನು ಭಕ್ತರು ಕೊಂಡೊಯ್ಯಲಿಲ್ಲವಲ್ಲ ಎಂದು ಪಶ್ಚಾತ್ತಾಪ ಪಟ್ಟರು" ಎಂದು ಹೇಳಿ ಗಂಡ ಹೆಂಡತಿಗೆ ನಡೆದ ಸಂಭಾಷಣೆಯನ್ನು ಶಿಷ್ಯರು ವಿವರಿಸಿದರು.

ರಾಮಾನುಜರು ತಕ್ಷಣ ಪ್ರಶ್ನಿಸಿದರು. "ಹೇ ಮಕ್ಕಳೆ, ನಿಮ್ಮ ಪಂಚೆಗಳನ್ನು ಯಾರೋ ಹರಿದರೆಂದು ಜಗಳವಾಡಿದಿರಿ. ಹೊಲಸುಮಾತುಗಳಿಂದ ಬೈದಾಡಿದಿರಿ. ಹೊಡೆದಾಟಕ್ಕೂ ಆರಂಭಿಸಿದಿರಿ. ನೀವು ಶಿಷ್ಯರೋ ಅಥವಾ ತನ್ನ ಒಡವೆಗಳೇ ಹೋದರೂ ದುಃಖಪಡದೆ ಉಳಿದ ಆಭರಣಗಳನ್ನು ಭಕ್ತರು ಕೊಂಡೊಯ್ಯಲಿಲ್ಲವಲ್ಲ ಎಂದು ಕೊರಗುವ ಧನುರ್ದಾಸನು ಶ್ರೇಷ್ಠನೊ ? ನೀವೇ ಹೇಳಿ ಯಾರು ಶ್ರೇಷ್ಠರು ?" ಶಿಷ್ಯರು ನಾಚಿಕೆಯಿಂದ ತಲೆತಗ್ಗಿಸಿದರು

ನಿಜವಾದ ಬ್ರಾಹ್ಮಣರು ನೀವೊ ಅಥವಾ ಧನುರ್ದಾಸನೋ ಯಾರು ? ಯಾರ ಹೃದಯದಲ್ಲಿ ದ್ವೇಷವಿಲ್ಲವೊ, ಅಸೂಯೆಯಿಲ್ಲವೊ, ಕಪಟತನ ಇಲ್ಲವೊ ಅವನೇ ಬ್ರಾಹ್ಮಣ. ಸದಾ ತೃಪ್ತನೂ ಶಾಂತನೂ, ಇತರರಿಗೆ ಒಳ್ಳೆಯದನ್ನು ಬಯಸುವವನು ಯಾರೊ ಅವನೇ ಬ್ರಾಹ್ಮಣ" ಎಂದರು ಶಿಷ್ಯರಾರೂ ಮಾತನಾಡಲಿಲ್ಲ.

"ನಾನು ಉತ್ತಮಕುಲದವನು ಎಂಬ ಜಂಭವನ್ನು ಬಿಡಿ, ನಾನು ವಿದ್ಯಾವಂತ ಶ್ರೇಷ್ಠ ಎಂಬ ಅಹಂಕಾರವನ್ನು ಬಿಡಿ, ನಾನು ಧನವಂತ, ಎಲ್ಲರಿಗಿಂತ ಅನುಕೂಲವುಳ್ಳವನು ಎಂಬ ಮದವನ್ನು ಬಿಡಿ. ಜಾತಿಯ ಮದ, ವಿದ್ಯೆಯ ಮದ, ಧನದ ಮದ ಇವು ನಿಮ್ಮ ಪ್ರಗತಿಗೆ ದೊಡ್ಡ ಅಡಚಣೆ" ಎಂದು ಬುದ್ಧಿವಾದ ಹೇಳಿದರು. ಶಿಷ್ಯರು ನಾಚಿಕೆಯಿಂದ ತಲೆಬಗ್ಗಿಸಿ, ಹೊರಟು ಹೋದರು.

ಮಾರನೆಯ ದಿನ ಧನುರ್ದಾಸನು ಮಠಕ್ಕೆ ಬಂದನು. ಎಂದಿನಂತೆ ತನ್ನ ಕೆಲಸದಲ್ಲಿ ತೊಡಗಿದನು. ತನ್ನ ಮನೆಯಲ್ಲಿ ಕಳುವಾದ ಸುದ್ದಿಯನ್ನು ಯಾರಿಗೂ ಹೇಳಲೇ ಇಲ್ಲ. ರಾಮಾನುಜರೇ ಕೇಳಿದರು. "ಉಳಿದ ಆಭರಣಗಳನ್ನು ಅವರು ತೆಗೆದುಕೊಂಡು ಹೋಗಿದ್ದರೆ ನಮಗೆ ತೃಪ್ತಿಯಾಗುತ್ತಿತ್ತು" ಎಂದು ಧನುರ್ದಾಸ ನುಡಿದನು. ಕೆಲವು ದಿನಗಳಾದ ಮೇಲೆ ರಾಮಾನುಜರು ಧನುರ್ದಾಸನಿಗೆ ನಡೆದುದ್ದೆಲ್ಲವನ್ನೂ ಹೇಳಿದರು. ಆಶ್ರಮದಲ್ಲಿಯೇ ಇರಿಸಿದ್ದ ಆಭರಣಗಳನ್ನು ಅವನಿಗೆ ಹಿಂದಿರುಗಿಸಿದರು.

ಜ

ಧನುರ್ದಾಸನು ತನ್ನ ಕೊನೆಯವರೆವಿಗೂ ಗುರುಸೇವೆಯಲ್ಲಿಯೇ ಕಾಲ ಕಳೆದನು. ಭಕ್ತಿಯಿಂದ, ಶ್ರದ್ಧೆಯಿಂದ ರಾಮಾನುಜರ ಸೇವೆಯನ್ನು ನಡೆಸುತ್ತಲೇ ಇದ್ದನು. ರಾಮಾನುಜರು ಚೋಳರಾಜ್ಯದಿಂದ ಕರ್ನಾಟಕ ರಾಜ್ಯಕ್ಕೆ ಹೊರಟಾಗ ಧನುರ್ದಾಸನು ಅವರ ಅಂಗರಕ್ಷಕನಾಗಿದ್ದನು. ದಾರಿಯುದ್ದಕ್ಕೂ ಮುಂದೆ ಮುಂದೆ ಸಾಗುತ್ತ ರಾಮಾನುಜರು ಹೆಜ್ಜೆಯಿಡುವಲ್ಲಿ ಬಿದ್ದಿದ್ದ ಕಲ್ಲುಮುಳ್ಳುಗಳನ್ನು ದೂರಹಾಕುತ್ತಿದ್ದನು. ರಾಮಾನುಜರು ಮೇಲುಕೋಟೆಯಲ್ಲಿ ಇದ್ದಾಗಲೂ, ಅನಂತರ ಅವರು ಶ್ರೀರಂಗಕ್ಕೆ ಹಿಂತಿರುಗಿದಾಗಲೂ ಅವರ ಹತ್ತಿರವೇ ಇದು ಸೇವೆ ಮಾಡುತ್ತಿದ್ದನು.

ಶ್ರೀ ರಾಮಾನುಜರು ತೀರಿಕೊಂಡಾಗ ತಾಯಿಯನ್ನು ಕಳೆದುಕೊಂಡ ತಬ್ಬಲಿಯಂತೆ ಧನುರ್ದಾಸನು ಕಂಗಾಲಾದನು. ಅನಾಥನಾದ ಧನುರ್ದಾಸನು ತನ್ನ ಗುರುವಿನ ಸ್ಮರಣೆಮಾಡುತ್ತ ಸ್ವಲ್ಪ ದಿನಕ್ಕೆಲ್ಲ ತಾನೂ ಪರಮಪದವನ್ನು ಸೇರಿದನು.

★

(16ನೇ ಪುಟದಿಂದ)

ವೆವು. ಮನಃಪೂರ್ವಕವಾಗಿ ನಿನ್ನ ಪಾದಗಳನ್ನೆ ಮುಟ್ಟಿ ಪೂಜಿಸಬೇಕೆಂದು ಬಂದಿರುವೆವು. ನಿನ್ನ ಹೊರತು ಅನ್ಯರ ಆಶ್ರಯ ಕಾಣೆವು. ಮೋಕ್ಷಾಪೇಕ್ಷಿಗಳಿಗೆ ನಿನ್ನಲ್ಲಿಯ ನಿಷ್ಠೆ ಅವರಿಗೆ ವಿಷಯದ ಕಟ್ಟಾಸೆಯನ್ನೇಕೆ ತೋರುವಿ?

"ಸ್ತ್ರೀಯರಿಗೆ ಅವರ ಪತಿಯೇ ಸಹೃದ ಸ್ನೇಹ (ಪ್ರೇಮ) ವನ್ನು ಕೊಡಬೇಕು, ಇದು ಸತ್ಯ. ನೀನು ನಮ್ಮೆಲ್ಲರಿಗೆ ಪ್ರಿಯನು, ನಿನ್ನ ಸಂಪರ್ಕದಿಂದ ನಾವೆಲ್ಲರೂ ನಿನಗೆ ಪ್ರಿಯರು. ನಿನ್ನ ಸ್ನೇಹದಲ್ಲಿ ತೊಡಗಿ ಹುಡುಕುತ್ತ ಬಂದಿರುವೆವು,ಪ್ರಿಯೋತ್ತಮಾ, ನಮ್ಮ ಆಶೆಗಳನ್ನು ಪೂರೈಸಿ, ಹೃದಯ ತಾಪ ನಿವಾರಿಸುವ ಹರಿಯೇ, ಮತ್ತೆ ಕೇಳು;

ನಿಮ್ಮ ಶ್ರೀಪಾದಾಬ್ಜ ಬಿಟ್ಟೇಳಲೊಲ್ಲವು<br>
ನಮ್ಮ ಕಾಲ್ಗಳು ಮುಂದಕೆ ತವಾಧರ<br>
ಹಮ್ಮುರುತವನ್ನು ಸೇಚಿಸು<br>
ಮುಂದಸ್ಮಿತೇಕ್ಷಣ ಲಕ್ಷಣನಾಗಿ

ನಿನ್ನ ಪಾದ ಕಮಲಗಳನ್ನು ಬಿಟ್ಟು ನಮ್ಮ ಕಾಲುಗಳು ಏಳಲೊಲ್ಲವು. ಮಂದಹಾಸದ ನೋಟ ಬೀರುತ್ತ ನಿನ್ನ ಅಧರಾಮೃತವನ್ನು ಸೇಚನೆ ಮಾಡು. ನಮ್ಮ ಆಶೆಗಳನ್ನು ಪೂರೈಸು, ವಿರಹಾಗ್ನಿಯನ್ನು ನಂದಿಸು, ನಿನ್ನ ಕೃಪಾಂಬುಧಿಯಲ್ಲಿ ಶಾಂತಗೊಳಿಸು. ಇಂದು ನೀನು ಉಪೇಕ್ಷಿಸಿದರೆ ನಿನ್ನ ಪಾದಗಳಿಗೆ ನಮ್ಮ ಪ್ರಾಣಗಳನ್ನೆ ಒಪ್ಪಿಸುವೆವು. ಇಂದಿವರೇಕ್ಷಣ; ನಮ್ಮ ಹೃದಯಕ್ಕೆ ನಿನ್ನ ಕೈ ಮುಟ್ಟಿಸಿ ಕಾಪಾಡು" ಎಂದು ಅನನ್ಯ ಶರಣಾಗತರಾಗಿ ಬಂದ ಗೋಪಿಯರಿಗೆ ಭಕ್ತಪ್ರಿಯನಾದ ಶ್ರೀ ಕೃಷ್ಣನು ಇಂದುಮುಖಿಯರ ಮಧ್ಯದಲ್ಲಿದ್ದು ಮಂದಹಾಸ ಕಡೆಗಣ್ಣೋಟಗಳನ್ನು ಬೀರಿ ಸ್ಮರಮಣನಾಗಿ ರಮಿಸಿದನು. ಗೋಪಿಯರ ಮಧ್ಯದಲ್ಲಿದ್ದರೂ ಆತನು ಯೋಗೇಶ್ವರೇಶ್ವರನು. ಅಂದು ಯೋಗೇಶ್ವರೇಶ್ವರ ದಯಾಂಬುಧಿ ಇಂದುಮುಖೇರ ರಮಿಸಿದ ಸ್ಮರಮಣ ಮಂದಹಾಸ ಕಡೆಗಣ್ಣೋಟದಿಂದ ಕೂಡಿದ ಕೃಷ್ಣನು ಇಂದು ಭಾಮೆಯರ ಮಧ್ಯದಲ್ಲಿ, ಕೋಮಲಾಂಗಿಯರಾದ ಗೋಪಿಯರ ತೋಳಲ್ಲಿ ತೋಳಿಟ್ಟು ಪೂರ್ಣಕಾಮನಾಗಿ ಮನ್ನಿಸಿದನು. ಸೋಮಪೂರ್ವ ನರಮುಖಿಯರಿಗೆ ಪ್ರೇಮಾಲೋಕನ ಭಾಗ್ಯವು ದೊರೆಯಿತು. ಗೋಪಿಯರ ಪ್ರೇಮದ ಹೊನಲು ಪ್ರಗಾಢವಾದ ಭಕ್ತಿಯಿಂದ ಮಧುರ ಭಾವವನ್ನು ತಾಳಿತು. ಇದನ್ನೆ ರಸಿಕರು 'ಗೋಪೀಭಾವ' ಎಂದು ಕರೆದರು.

'ಶ್ರೀ ಮಾಧವನು ತಮಗೆ ವಶವಾದನು' ಎಂದು ಮತ್ತರಾದ ಗೋಪಿಯರು ತಿಳಿದರು. ಈ ಮಹಾಪರಾಧವನ್ನು ಕಂಡು ದೇವೇಶ ಕೃಷ್ಣನು ಮತ್ತೆ ಅಪ್ರತ್ಯಕ್ಷನಾದನು. ದಿವ್ಯ ಪ್ರೇಮನನ್ನೂ ಪರಿಣತಗೊಳಿಸಿ ಆನಂದವನ್ನು ಬೀರಿದ ಶ್ರೀಭೂದುರ್ಗಾಲೋಲನಾದ ವೆಂಕಟಕೃಷ್ಣನು ಸರ್ವರ ಆಶೆಗಳನ್ನು ಪೂರೈಸುವವನಾಗಿ ಗೋಕುಲದಲ್ಲಿ ಶೋಭಿಸಿದನು.

ಭಾಗಗತವೆಂದರೆ ಭಕ್ತಿಯ ಗಣಿಯು. ಇಂಥ ವಜ್ರದ ಗಣಿಯು ಪ್ರಸನ್ನ ವೆಂಕಟರಂಥ ಭಕ್ತ ಕವಿಗಳ ಕೈಗೆ ಹತ್ತಿದ ಮೇಲೆ ಕೇಳುವುದೇನಿದೆ? ಅವರು ಅದರಲ್ಲಿಯ ವಜ್ರಗಳನ್ನು ತೆಗೆದು ಸಾಣೆ ಹಿಡಿದು ಕನ್ನಡ ಭಾಷೆಯ ಹೊಳವನ್ನು ಕೊಟ್ಟಿರುವರು, ಭಕ್ತಿ ರಸಕ್ಕೆ ಕನ್ನಡದ ಒಪ್ಪು ಹಾಕಿರುವರು, ಭಾಗವತವು,

ಈರೇಳು ಜಗದಘ ಹರಿವುದು<br>
ಕರ್ಣಾಪೂರಿತ-ಪೀಯೂಷವು,<br>
ನಾರಾಯಣ ಪ್ರಸನ್ನ ವೆಂಕಟ<br>
ಕೃಷ್ಣನತೋರಿ ಕೊಡುವ ರಸವು

ಎಂದು ಕವಿಗಳು ಫಲಶ್ರುತಿ ಹೇಳಿದ್ದಾರೆ.

ಗೃಹಲಕ್ಷ್ಮಿ

# ಹರಿದಾಸರು ಕಂಡ
# ಲಕ್ಷ್ಮೀದೇವಿ

"ತಂದೆ ನೀನೆ ಕೃಷ್ಣ, ತಾಯಿ ಇಂದಿರ ದೇವಿ" ಎಂದು ನಂಬಿ ಹರಿದಾಸರುಗಳು ಸಂಸಾರವೆಂತೆಂಬ ಸೌಭಾಗ್ಯವನ್ನು ಆನಂದದಿಂದ ಅನುಭವಿಸಿದ್ದಾರೆ. ಜಗನ್ಮಾತಾಪಿತೃಗಳ ಕೃಪೆಯ ಮಡಿಲಲ್ಲಿ ಮಕ್ಕಳಾಗಿ ನಲಿದಾಡಿದ್ದಾರೆ. ಮಕ್ಕಳಿಗೆ ತಂದೆಗಿಂತ ತಾಯಿಯಲ್ಲಿ ಸಲಿಗೆ ಹೆಚ್ಚು. ತಂದೆಯನ್ನು ಒಲಿಸಿಕೊಳ್ಳಲು ಮಕ್ಕಳು ಆಶ್ರಯಿಸುವುದು ತಾಯಿಯನ್ನು. ಹರಿದಾಸರು ಸಹ ಇದೇ ರೀತಿ ಶ್ರೀಹರಿಯನ್ನು ಒಲಿಸಿಕೊಳ್ಳಲು, ಅವನ ಕೃಪೆಯನ್ನು ಪಡೆಯಲು ಲಕ್ಷ್ಮೀದೇವಿಯನ್ನು ಮೊರೆ ಹೊಕ್ಕಿದ್ದಾರೆ.

ಲಕ್ಷ್ಮೀದೇವಿ ಜಗತ್ತಿಗೇ ತಾಯಿ, ವಾತ್ಸಲ್ಯಾದಿ ಗುಣೋಜ್ವಲೆ, ಶ್ರೀಹರಿಯ ಕ್ಷಾಂತಿ ಸಂವರ್ಧಿನಿ. ಪುರುಷಕಾರ ಸ್ವರೂಪಳು. ಶ್ರೀಹರಿಯನ್ನು ಅವಿನಾಭಾವದಿಂದ ಎಡಬಿಡದೆ ಸೇವಿಸುತ್ತ ಅವನ ಮನವನ್ನು ಒಲಿಸಿಕೊಂಡವಳು. ತನ್ನ ಭಕ್ತರಿಗೆ ಒಲಿಸಿಕೊಡಬಲ್ಲ ಶಕ್ತಿಯುಳ್ಳವಳು, ಶ್ರೀಹರಿಯ ಪಟ್ಟದರಾಣಿಯನ್ನು, ಶರಣಾಗತ ಜನ ಪರಿಪಾಲನಶೀಲೆಯನ್ನು, ಸುಮಾಸ್ತ್ರನಯ್ಯನೆದೆ ಮೇಲೆ ಸತತ ಬಹುಮಾನದಲ್ಲಿ ಮೆರೆವ ಮಹಾಮಹಿಮಳನ್ನು, ಸಾಧು ಸಜ್ಜನರ ಚಿತ್ತದಿ ಪೊಳೆಯುವ ಪುತ್ಥಳಿಗೊಂಬೆಯನ್ನು, ಆದಿಶಕ್ತಿ, ಸರ್ವಾಧಾರೆ, ಲೋಕನಾಯಕಿ, ಲಕುಮೀದೇವಿಯನ್ನು, ಪುರಂದರದಾಸರು, ವಿಜಯದಾಸರು, ವಾದಿರಾಜರು, ಗೋಪಾಲದಾಸರು ಮೊದಲಾಗಿ ಎಲ್ಲ ಹರಿದಾಸರುಗಳೂ ಪರಮಭಕ್ತಿಯಿಂದ ಬಗೆಬಗೆಯಾಗಿ ಸ್ತುತಿಸಿ ಬಣ್ಣಿಸಿದ್ದಾರೆ. ಕಾಡಿ ಬೇಡಿದ್ದಾರೆ, ಹಾಡಿ ಹೊಗಳಿದ್ದಾರೆ. ಅವರ ಸ್ತೋತ್ರ ಸುಧಾರಸವನ್ನು ನಾವೂ ಸವಿದು ಧನ್ಯರಾಗೋಣ.

ಪುರಂದರದಾಸರು ಲಕ್ಷ್ಮೀದೇವಿಯನ್ನು ಕುರಿತು ರಚಿಸಿರುವ ಕೃತಿಗಳು ನಾಲ್ಕೇ ಆದರೂ ಬಹು ಸುಂದರವಾಗಿವೆ. "ಭಾಗ್ಯದಾಲಕ್ಷ್ಮಿ ಬಾರಮ್ಮ" ಎನ್ನುವ ಹಾಡು ಶುಕ್ರವಾರದ ದಿನ ಕೇಳಬಂದಿರುವ ಮನೆಯೇ ಕನ್ನಡನಾಡಿನಲ್ಲಿಲ್ಲ ಎನ್ನಬಹುದು. ದೇವಿಯನ್ನು ದಾಸರು ತಮ್ಮ ಮನೆಗೆ ಬರುವಂತೆ ಕರೆಯುತ್ತಿದ್ದಾರೆ. "ಭಾಗ್ಯದಾಲಕ್ಷ್ಮಿ ಬಾರಮ್ಮ ನಮ್ಮಮ್ಮ ನೀ ಸೌಭಾಗ್ಯದಾ ಲಕ್ಷ್ಮಿ ಬಾರಮ್ಮ" ಎಂದು. 'ಹೆಜ್ಜೆಯ ಮೇಲೆ ಹೆಜ್ಜೆಯನಿಕ್ಕುತ, ಗೆಜ್ಜೆಯ ಕಾಲಿನ ಪಾದವ ತೋರುತ, ಸಜ್ಜನ ಸಾಧು ಪೂಜೆಯವೇಳೆಗೆ ಮಜ್ಜಿಗೆಯೊಳಗಿನ ಬೆಣ್ಣೆಯಂತೆ' ದೇವಿ ಬರುತ್ತಾಳೆ. ಕನಕ ವೃಷ್ಟಿಯನ್ನು ಕರೆಯುತ್ತ, ಮನದ ಸಿದ್ಧಿಯನ್ನು ನೀಡುತ್ತ, ದಿನಕರಕೋಟಿ ತೇಜದಿಂದ ಹೊಳೆಯುತ್ತ, ಸಾಧು ಸಜ್ಜನರ ಚಿತ್ತದಿ ಪೊಳೆಯುವ ಈ ಪುತ್ಥಳಿಗೊಂಬೆ ಅತ್ತಿತ್ತಲುಗದೆ ಭಕ್ತರ ಮನೆಯಲ್ಲಿ ನೆಲೆಸುತ್ತಾಳೆ. ಸಂಖ್ಯೆಯಿಲ್ಲದ ಭಾಗ್ಯವನ್ನು ಕೊಟ್ಟು, ಸಕ್ಕರೆ ತುಪ್ಪದ ಕಾಲುವೆಯನ್ನೇ ಹರಿಸುತ್ತಾಳೆ. ಸರ್ವಸಂಪತ್ತಿನ ಅಧಿದೇವತೆಯೇ ಒಲಿದಮೇಲೆ ಇನ್ನೇನು ಕೊರತೆ! ಹೀಗೆ ಮನಮಂದಿರದಲ್ಲಿ ನೆಲಸಿದ ದೇವಿಯ ದಿವ್ಯ ಸೌಂದರ್ಯವನ್ನು ಪುರಂದರದಾಸರು ಹೃದಯದುಂಬಿ, ಕಮಲ ಸುಗಂಧಿಯೇ, ಕಮಲದಳ ನೇತ್ರೆಯೇ, ಕಮಲ ವಿಮಲ ಶೋಭಿತೇ, ಕಮನೀಯ ಹಸ್ತಪದ ಕಮಲ ವಿರಾಜಿತೇ, ಕಮಲೇ, ಅರವಿಂದಾಲಯೇ, ತಾಯೇ, ಎಂದು ವರ್ಣಿಸುತ್ತಾರೆ



"ಪಾಲಿಸೆ ಎನ್ನ ಮಹಾಲಕ್ಷ್ಮಿ, ಪಾಲಿಸೆ ಎನ್ನ ಪಾಲಾಬ್ಧಿ ಸಂಜಾತೆ, ಎಂದು ಮೊರೆಯಿಡುತ್ತಾರೆ. ದಯದಿಂದ ನೋಡು ಭಯದೂರಮಾಡು. ನೀನಲ್ಲದನ್ಯ ರಕ್ಷಿಪರನ್ನು ಕಾಣೆ, ಪುರಂದರವಿಠಲನ್ನ ಧ್ಯಾನಿಪ ಭಕ್ತರ ಮಾನ ನಿನ್ನದು ತಾಯೆ—ಎಂದು ಪ್ರಾರ್ಥಿಸುತ್ತಾರೆ. ಇಂತಹ ಹೃದಯಾಂತರಾಳದಿಂದ ಹೊಮ್ಮಿ ಬಂದ ಪ್ರಾರ್ಥನೆಗೆ ದೇವಿ ಒಲಿಯದಿರುವಳೆ!

ಪುರಂದರದಾಸರು ರಚಿಸಿರುವ "ಏನು ಧನ್ಯಳೊ ಲಕುಮಿ ಎಂಥ ಮಾನ್ಯಳೊ" ಎನ್ನುವ ದೇವರನಾಮ ಬಹು ಮನೋಜ್ಞವಾಗಿ ದೇವಿ ಶ್ರೀಹರಿಯನ್ನು ಸೇವಿಸುವ ಪರಿಯನ್ನು ಬಣ್ಣಿಸುತ್ತದೆ. ಸರ್ವಸ್ಥಳದಿ ವ್ಯಾಪ್ತನಾದ, ಶ್ರೀಹರಿಯನ್ನು ದೇವಿ ತಾನೂ ಛತ್ರ, ಚಾಮರ, ವ್ಯಜನ, ಪರ್ಯಂಕ ಮುಂತಾದ ಸಕಲರೂಪಗಳನ್ನೂ ಧರಿಸಿ ಸಾನುರಾಗದಿಂದ ಆರಾಧಿಸುತ್ತಿದ್ದಾಳೆ. ಕಣ್ಣು ಸನ್ನೆಗೆ ಕೈಕಟ್ಟಿ ಬರುವ ಕೋಟಿ ಕೋಟಿ ಭೃತ್ಯರಿದ್ದರೂ, ಹಾಟಕಾಂಬರನ ಸೇವೆ ಸಾಟಿಯಿಲ್ಲದೆ ನಿತ್ಯದಲ್ಲಿಯೂ ಮಾಡುತ್ತಿದ್ದಾಳೆ. ಆರಾಧಿಸಿ ಪೂರ್ಣನೋಟದಿಂದ ಸುಖಿಸುತ್ತಿದ್ದಾಳೆ. ಎಷ್ಟು ಸುಂದರವಾದ ಮನ ಮುಟ್ಟುವ ವರ್ಣನೆ ಇದು! ಭಕ್ತ ದೇವರನ್ನು ಆರಾಧಿಸಬೇಕಾದ ರೀತಿಯನ್ನು ದೇವಿ ತಾನು ಗೈದು ತೋರುತ್ತಿದ್ದಾಳೆ. ಅದನ್ನು ಚಿತ್ರಿಸಿ ಪುರಂದರದಾಸರು ನಮಗೆ ಮಾರ್ಗದರ್ಶನ ನೀಡುತ್ತಿದ್ದಾರೆ.

ಮಹಾಮಹಿಮರಾದ ವಾದಿರಾಜರು ತಮ್ಮ 'ಇಂದಿರೆ ಮಂದಿರದೊಳು ನಿಂದಿರೆ' ಎಂಬ ದೇವರ ನಾಮದಲ್ಲಿ "ಘಲು ಘಲು ಗೆಜ್ಜೆಯ ನಾದದಿಂದ ಥಳಥಳಿಸುವ ದಿವ್ಯಪಾದದೊಳು ಪಿಲ್ಯ ಕಾಲುಂಗುರನಾದ, ಅಂಘ್ರಿ ಚಲಿಸುವ ಸುನಾದ. ಆಹಾ ಕಾಲಲಂದಿಗೆ ಝಳಪಿಸುತ್ತ ನಮ್ಮಾಲಯದೊಳು ನಿಲ್ಲೆ ಪಾಲವಾರಿಧಿ ಕನ್ನೆ" ಎಂದು ಪ್ರಾರ್ಥಿಸಿದ್ದಾರೆ. 'ಕೊರಳೊಳಗಿರುವ ನಾನಾವಿಧದ್ಹಾರ, ಬಾಯಲಿರುವೊ ಕರ್ಪೂರ ವೀಳ್ಯ, ಎರಳೆಗಂಗಳ ಸಿರಿ, ಅರಳೆಲೆ ಕುಂಕುಮ ಹೆರಳ ಗೊಂಡ್ಯಗಳಿಂದ" ಶ್ರೀಹರಿಯನ್ನೇ—ಮೋಹಿನಿಯವತಾರ ತಾಳಿದ ಮೋಹನನನ್ನೇ—ನೀನು ಮೋಹಿಸುತ್ತೀಯ—ಎಂದು ದೇವಿಯ ಮನಮೋಹಕ ಸೌಂದರ್ಯವನ್ನು ವರ್ಣಿಸಿದ್ದಾರೆ. ಸ್ಮರಮಣನೆನಿಪ ರಮಣನ ಉರದಲ್ಲಿ ಸ್ಥಿರವಾಗಿ ಅರಮನೆಯ ಮಾಡಿ ಮೆರೆಯುತ್ತಿದ್ದೀಯೆ ಎಂದು ಅಭಿನಂದಿಸಿದ್ದಾರೆ. ನಿನ್ನಂಗವಪ್ಪಲು, ನೋಡಲು, ಮುಖವ ಚುಂಬಿಸಲು, ಅನಂತಕರ ವಕ್ತ್ರನೇತ್ರಗಳನ್ನು ನಿನ್ನ ಪತಿ ಕೈಗೊಂಡ—ಎಂದು ಒಂದು ಅದ್ಭುತ ಕಲ್ಪನೆಯನ್ನೇ ಮೂಡಿಸಿದ್ದಾರೆ. ನಿನ್ನ ತಾರುಣ್ಯ ಲಾವಣ್ಯಗಳನ್ನು ಕಾಪಿಡಲು ತನ್ನ ಮೈಯ್ಯಿಂದಲೇ ಮಕ್ಕಳನ್ನು ಶ್ರೀಹರಿ ಸೃಷ್ಟಿಸಿದ ಎಂದು ಚಾಟೂಕ್ತಿಯಾಡಿದ್ದಾರೆ. "ಭಕ್ತರ ಭಯ ನಿವಾರಿಸುವ ದೇವಿ ನಿನ್ನ ಸರಿಸಮಾನರನ್ನು ಕಾಣೆ, ಎನ್ನ ಕಾಯುವ ಅನ್ಯರನ್ನ ಕಾಣೆ, ಕೈಯ್ಯ ಪಿಡಿದು ಭವಭಯವ ಪರಿಹರಿಸಿ ಸಿರಿ ಹಯವದನನ ದಯವ ಪಾಲಿಸು ತಾಯೆ." ಎಂಬ

ಶ್ರೀಮತಿ ಸುಮನಾ ಬದರೀನಾಥ್

ದೈನ್ಯಭಕ್ತಿಗಳಿಂದ ಬೇಡುತ್ತಾರೆ. ಈ ಬೇಡಿಕೆಯನ್ನು ದೇವಿ ಪೂರೈಸದಿರುವಳೆ?

ವಿಜಯದಾಸರು "ಪಾಲಿಸೆ ಪದುಮಾಲಯೆ ಬೇಗನೆ ಬಂದು, ಕಾಯೆ ಕರುಣಾಂಬುಧಿಯೆ, ಇಂದಿರಾದೇವಿ, ಸತತ ಜ್ಞಾನವೀಯೆ, ಭಕ್ತರ ಪ್ರಿಯೆ" ಎಂದು ಹರಿಪ್ರಿಯೆಯನ್ನು ಕುರಿತು ಹಾಡಿದ್ದಾರೆ. "ಅನ್ಯರ ನೆನೆಯಲೊಲ್ಲೆ, ನಿನ್ನಯ ಪಾದವನ್ನು ನಂಬಿದೆ ನೀ ಬಲ್ಲೆ, ಸುಪ್ರಸನ್ನೆ ಸರ್ವಜೀವಾಭಿನ್ನೆ, ಭಾಗ್ಯಸಂಪನ್ನೆ, ಮನ್ನಿಸು ನೀ ದಯದಿ ಬಿನ್ನಪಲಾಲಿಸಿ ಚೆನ್ನೆ" ಎಂದು ಬೇಡುತ್ತಾರೆ. "ವಿಜಯ ವಿಠಲನನ್ನು ಭಜಿಸಿಪಾಡುವ ಭಕ್ತಕೂಟವ ನಿಜದಿ ಸಲಹುವಳೆಂಬ ಬಿರುದುಳ್ಳ ವಿಜಯ ಸಾರಥಿ ವಿಶ್ವಂಭರ ಪ್ರಿಯೆ, ಪತಿತರೊಳಿಡದಲೆ ಗತಿಗೆ ಸಮ್ಮತಳಾಗು" ಎಂಬುದೇ ಅವರ ಕೋರಿಕೆ.

ಗೋಪಾಲದಾಸರು ಲಕ್ಷ್ಮಿದೇವಿಯನ್ನು "ಕಮಲಮುಖಿಯೆ, ಕಮಲಾಲಯೆ, ಕಮಲೆ, ಕಮಲಾಕ್ಷಿಯೆ, ಕೋಮಲೆ, ಕಮಲನಾಭನ ಪಾದ ಕಮಲಯುಗಳ ಮಧುಪೆ, ಕಮಲಜ ಜನನಿಯೆ, ಕಮಲ ಮಿತ್ರೆ, ಸುಪ್ರಭೆ ಎಂದು ಕಮನೀಯ ವಾಕ್ಯಗಳಿಂದ ಸ್ತುತಿಸಿದ್ದಾರೆ. ದೇವಿಯ ದಿವ್ಯ ಸೌಂದರ್ಯವನ್ನು ಬಗೆಬಗೆಯಿಂದ ಬಣ್ಣಿಸಿದ್ದಾರೆ. ಅರುಣನ ಪೋಲುವ ಚರಣವು, ಬಾಲಚಂದಿರನ ಸೋಲಿಪ ನಖವು, ಕರಿಯದಂತದಂತೆ ಜಾನು, ಸುರಭಿ ಚಂಪಕ ನಾಸಿಕ ಮೂಗುತಿ, ಪುಬ್ಬು ಸ್ಮರನ ಚಾಪದಂತೆ, ಇಂತಹ ದಿವ್ಯ ಸೌಂದರ್ಯಕ್ಕೆ ಕಳಶವಿಟ್ಟಂತೆ "ಶಾಂತ ಪರಮ ಕರುಣನೋಟ" ಭಕ್ತರ ಭಾಗ್ಯದ ಬಾಗಿಲನ್ನು ತೆರೆಯುವುದು.

ಲಕ್ಷ್ಮೀದೇವಿ ಶ್ರೀಹರಿಯನ್ನು ಸೇವಿಸುವ ಬಗೆಯನ್ನು ಹೀಗೆ ಬಣ್ಣಿಸಿದ್ದಾರೆ. ಅವಳು ಶ್ರೀಹರಿಯ ನಾನಾ ಅವಯವಗಳಲ್ಲಿ, ನಾನಾರೂಪಗಳಲ್ಲಿ ನಿಂದಿದ್ದಾಳೆ. ವಿಠಲನರವಿಂದ ಚರಣಕಿಂದು ಅಂದಿಗೆ ಗೆಜ್ಜೆಯಾದೆ, ಕರಧರದಲ್ಲಿ ಚಿತ್ರವಿಚಿತ್ರ ಪರಿ ಗಂಧವು, ಪದಕ ಹಾರಂಗಳು ಪುಷ್ಪತುಲಸಿಯಿಂದೊಪ್ಪುವ ಅಲಂಕಾರವಾದೆ. ಒಂದೊಂದು ಹಸ್ತದಲ್ಲಿ ಆಯುಧಗಳಾದೆ. ಸಂಧಿಸಂಧಿಗೆ ನಾನಾಭರಣಲಂಕಾರಗಳಾದೆ. ಇಂದಿರೇಶನ ಪ್ರತಿ ಅವಯವಗಳಲಿನ್ನು ಇಂದಿರೆ ಪ್ರತಿ ಪ್ರತಿ ವಸ್ತುವಾಗಿದ್ದಾಳೆ.

ಅಷ್ಟೇ ಅಲ್ಲ ದೇವರ ಪರಿಪರಿ ರೂಪವಾಗಿ, ಗೋಪಾಲವಿಠಲನ ಚರಣಕಮಲವನ್ನು ಪರಿಪರಿಯಾಗಿ ಸೇವಿಸುವಳು. ಹರಿ ಅನಿರುದ್ಧನಾದಾಗ, ಶಾಂತಿದೇವಿಯಾಗುತ್ತಾಳೆ. ಹರಿ ಪ್ರದ್ಯುಮ್ನನಾದಾಗ ಕೃತಿದೇವಿಯಾಗುತ್ತಾಳೆ. ಹ ಸಂಕರ್ಷಣನಾದಾಗ ಜಯದೇವಿಯಾಗುತ್ತಾಳೆ. ಹರಿ ವಾಸುದೇವನಾದಾಗ ಮಾಯಾದೇವಿಯಾಗುವಳು. ಅಷ್ಟೇ ಅಲ್ಲ, ಧರೆಯ ರೂಪದಿಂದ ಹರಿಗೆ ಕೂಡಲು ಗದ್ದುಗೆಯಾದಳು. ಕೊಡೆಯಾದಳು. ಹಲವು ವಿಧಾರ್ಚನೆಗಳಲ್ಲಿ ಪತಿಯನ್ನು ಒಲಿಸಿ, ವಲ್ಲಭನ ತೋಳಲಿ ಬಿಗಿದಪ್ಪಿದಳು. ಗೋಪಾಲವಿಠಲನನ್ನು ಸಹಸ್ರ ಪರಿಗಳಲ್ಲಿ ರಹಸ್ಯದಿಂದ ಪೂಜಿಸುತ್ತ ಕರುಣಾಕಟಾಕ್ಷದಿಂದ ಜಗವನ್ನೆಲ್ಲ ಪ್ರೇಮದಿಂದ ಸಲಹುತ್ತಾಳೆ.

ಒಂದು ವಿನೂತನ ಕಲ್ಪನೆಯನ್ನು ನಾವು ಗೋಪಾಲದಾಸರಲ್ಲಿ ಕಾಣುತ್ತೇವೆ. ಲಕ್ಷ್ಮೀದೇವಿ "ಗುಣತ್ರಯಾತ್ಮಕ ಚೂಲಿಯನ್ನು ಅಲಂಕರಿಸಿ, ವನಜ ಭವಾಂಡ ಪಾತ್ರೆಯನಲ್ಲಿರಿಸಿ, ಗಣನೆಯಿಲ್ಲದ ಜೀವಧಾನ್ಯ ತುಂಬಿರಿಸಿ, ಜನರ ಯೋಗ್ಯತೆ ಉದಕವನಲ್ಲಿ ಬೆರಸಿ, ಮಿನುಗುವ ಕರ್ಮ ಇಂಧನ ಕಾಲವೆ ಮಹಾ ಅವಳ ಜನರ ಸಾಧನವೆಂಬ ದರ್ವಿಲಿ ಇನಿತು ಪಾಕವ ಮಾಡಿ ಘನ ಮಹಿಮವ ಭೋಜನಕನುಕೂಲ' ಮಾಡುತ್ತಾಳಂತೆ. ಭೋಜನ ತಯಾರಿಸುವವರಾರು! ಭುಜಿಸುವವರಾರು! ಭೋಜನವೆಂತಹುದು! ಎಷ್ಟು ಅದ್ಭುತ ಕಲ್ಪನೆಯಿದು. ತನ್ನ ಪೂಜೆಯಿಂದ ಪ್ರಸನ್ನಳಾದ

ದೇವಿಯನ್ನು ಗೋಪಾಲದಾಸರು ಬೇಡುವವರಾರಾದರೂ ಏನು? "ಅಕ್ಷಯ ಫಲದ ಗೋಪಾಲ ವಿಠಲನ್ನ ಪ್ರತ್ಯಕ್ಷ ತೋರಿಸೆನ್ನಪೇಕ್ಷೆ ಪೂರೈಸೆ ತಾಯೆ" ಎನ್ನುತ್ತಾರೆ. "ಅನ್ನವಸನ ಧಾನ್ಯಕ್ಕಾಗಿ ಪರರನ್ನು ಯಾಚಿಸಿ ಬಲುಖಿನ್ನನಾಗುತಲಿ ನಿನ್ನನು ಮರೆದೆನು. ಎನ್ನವ ಗುಣಗಳನ್ನು ಎಣಿಸದಿರು ಮನ್ನಿಸು ಬಿನ್ನಪ.'' ನಿನ್ನ ಪಾದಕಮಲವ ನೆರೆಹೊಕ್ಕಿದ್ದೇನೆ. ಮಮತೆ ಪುಟ್ಟಿಸೆನಗೆ ಗೋಪಾಲವಿಠಲನಲ್ಲಿ. ಆ ದೇವನು ಕರುಣಿಸುವನು ನೀ ಕರವಿಡಿದವರ — ಎಂದು ಬೇಡುತ್ತಾರೆ.

ಹರಿದಾಸರು ಸಕಲ ಭಾಗ್ಯಗಳಿಗೂ ಅಧೀಶ್ವರಿಯಾದ ಲಕ್ಷ್ಮೀದೇವಿಯನ್ನು ಸ್ತುತಿಸುವುದು ಐಶ್ವರ್ಯಕ್ಕಾಗಿ ಅಲ್ಲ. ಶ್ರೀಹರಿಯ ಕರುಣೆಯನ್ನು ಪಡೆಯಲು. ಜಗನ್ನಾಥದಾಸರೂ ಅಷ್ಟೆ, "ಇಂದಿರೆ, ಇಂದುವದನೆ, ಸರಸಿಜ ಸದನೆ, ನಿಂದಿತ ಜನ ಸೂದನೆ, ವಂದಿಸುವೆನೆ ಅರವಿಂದಗಂಧಿನಿ ಮನ ಮಂದಿರದಲ್ಲಿ ಗೋವಿಂದನ ತೋರಿಸೆ" ಎಂದು ಬೇಡುತ್ತಾರೆ. 'ನೀ ಕರುಣಿಸಿ ಅವಲೋಕಿಸಿ ಎನ್ನಯ ಕಾಕುಮತಿಯ ಕಳೆದೇಕಾಂತದಿ ನಿತ್ಯ ಏಕ ಮನದಿ ಹರಿ ಶ್ರೀಕರ ಪದ ಧ್ಯಾನವನ್ನು ಕರುಣಿಸು' ಎಂದು ಕೇಳಿಕೊಳ್ಳುತ್ತಾರೆ. ಜಗನ್ನಾಥ ವಿಠಲನನ್ನು ಮಾತುಮಾತಿಗೆ ನೆನೆವಾತುರವನ್ನು ನೀಡು ಎಂದು ಬೇಡುತ್ತಾರೆ. ಹರಿಕಥಾಮೃತ ಸಾರವನ್ನು ರಚಿಸಿದ ಜಗನ್ನಾಥದಾಸರ ಶೈಲಿ ಬಹು ಮನೋಜ್ಞವಾದುದು. ಲಯಪ್ರಾಸ ಬಂಧುರವಾದುದು. ಕಿರಿ ಮಾತಿನಲ್ಲಿ ಹಿರಿದರ್ಥವನ್ನು ತೋರುವಂತಹುದು. ಉದಾಹರಣೆಗೆ ದೇವಿಯನ್ನು ಸ್ತುತಿಸಿರುವ ಈ ಸಾಲುಗಳನ್ನು ನೋಡೋಣ.

ಮೂಲೋಕ ಮಾತೆ ವಿಖ್ಯಾತೆ।
ಕೈವಲ್ಯದಾತೆ। ಪಾಲಗಡಲಸಂಭೂತೆ।
ಕಾಲದೇಶದಿ ವ್ಯಾಪಿತೆ ।
ಭಜಕರ ಪ್ರೀತೆ। ಶೀಲೆ ಸಂಪೂರ್ಣ ಗುಣವ್ರಾತೆ।

ಮತ್ತು

ಲೋಕನಾಯಕಿ ಲಕುಮಿ।
ಶ್ರೀ ಸಾರ್ವಭೌಮೆ। ಶೋಕರಹಿತೆ ಸುನಾಮೆ।
ನಾಕಜ ವನಧಿ ಸೋಮೆ।
ದೇವಲಲಾಮೆ। ಸಾಕಾರವಂತೆ ಗುಣಸ್ತೋಮೆ।

ಹಾಗೂ

ಜಾತರಹಿತೆ ಜಯವಂತೆ।
ದೈತ್ಯಕೃತಾಂತೆ। ಶೀತಾಂಶು ಕೋಟಿಮಿಗೆ।
ಪಾತಕದೂರೆ ನಿಜಪಂಥೆ।

ಇಂತಹ ಸ್ತುತಿಗೆ ಸಂತಸಹೊಂದುವ ದೇವಿ ಒಲಿಯುವುದರಲ್ಲಿ ಆಚ್ಚರಿಯೇನು ?

"ರಮಾ ಸಮುದ್ರನ ಕುಮಾರಿ ನಿನ್ನಯ ಸಮಾನರ್ಯಾರಮ್ಮಾ, ಸುಮಾಸ್ತ್ರನಯ್ಯನೆದೆ ಮೇಲೆ ಸತತ ಬಹುಮಾನದಲಿ ಮೆರೆವ ಮಹಾ ಮಹಿಮಳೇ" ಎಂದು ದೇವಿಯನ್ನು ಸ್ತುತಿಸುವ ಸುರಪುರದ ಆನಂದದಾಸರು ಬಡತನದ ಬೇಗೆಯಿಂದ ಬೆಂದು ಬಸವಳಿದು ಕೊಲ್ಲಾಪುರದ ಲಕ್ಷ್ಮೀದೇವಿಯ ಮೊರೆಹೊಕ್ಕವರು. "ಕರುಣದಿ ಕಣ್ಣು ತೆರೆಯೆ, ಬಾರಮ್ಮ ಸಿರಿಯೆ, ಧರಣಿಯೊಳಗೆ ಸುಂದರತರ ಕೊಲ್ಲಾಪುರ ಸಿಂಹಾಸನದಿ ಮೆರೆವ ದೇವಿಯೆ" ಎಂದು ದೇವಿಯನ್ನು ಪ್ರಾರ್ಥಿಸುತ್ತಾರೆ. ದೇವಿಯ ಕರುಣೆಯ ಕಡೆಗಣ್ಣೋಟ ವಿಧಿಭವಾಧಿಗಳ ಸದನಗಳಿಗೆ ಅಭ್ಯುದಯದ ಕಟಾಕ್ಷದ ಸುಧೆಯನ್ನು ಕರೆಯುತ್ತದೆ. ಆ ಕರುಣಾ ಕಟಾಕ್ಷ ಬಡವರ ಮನೆಗೆ ಭಾಗ್ಯದ ಹೊಳೆಯನ್ನು ಹರಿಸಲಾರದೆ ? ಭಕ್ತನ ಮನೆಮನಗಳಲ್ಲಿ ಪ್ರತ್ಯಕ್ಷಗೊಳ್ಳುವ ಆ ದೇವಿಯ ದಿವ್ಯ ಸೌಂದರ್ಯವಾದರೂ ಎಂತಹುದು. ಕನಕ ಮುಕುಟ ಮಂಡಿತ ಕುಟಿಲಾಲಕ ಜಾಲಿ, ಚಂದನ, ಕುಂಕುಮ, ಕಸ್ತೂರಿ ತಿಲಕಾಂಕಿತ ಫಾಲ, ಮಣಿಮಯ ಕುಂಡಲ ಶೋಭಿತ ಕರ್ಣ ಕಪೋಲ, ಮಿನುಗುವ ಮಾಣಿಕ ಮಣಿಯಧರ ಪುಟದೊಳಿನಿವರ ವಜ್ರದ ಕಣಗಳ ರಾಜಿ, ದಶನಯುತ ಸ್ಮೇರಾನನ ಕಾಂತಿ, ವನಜಭವನನ ಮನೆಗೆ ಮಂಗಳದ ಮಳೆಯನ್ನೇ ಸುರಿಸುತ್ತದೆ.

ಸುಂದರಾನನಾರವಿಂದವು ಮಲ್ಲಿಗೆ ಮಂದಹಾಸ ಮಕರಂದವನ್ನು ಕೃಪೆಯ ಸುಧೆಯೊಡನೆ ಬೆರಸಿ ಸೂಸುತ್ತದೆ. ಈ ಕಾರುಣ್ಯಮಯಿ ತಾಯಿ ಕಮಲೇಶ ವಿಠಲರಾಯನ ಪರಿಪೂರ್ಣ ಕರುಣೆಗೆ ಪಾತ್ರಳಾದವಳು. ತನ್ನ ಭಕ್ತರಿಗೂ ಹಂಚುತ್ತಾಳೆ. ಅವರು ದೇವಿಯಲ್ಲಿ ಬೇಡಿಕೊಳ್ಳುವುದಾದರೂ ಏನನ್ನು ? "ಕರುಣಿಸಮ್ಮ ತವ ಕರುಣಾ ಕಟಾಕ್ಷದ ಸಿರಿಯ ಬೆಳಗಿನೊಳು ಸಂಚರಿಸುವ ಸುಜನರ ಚರಣಾಂಬುಜ ಪರಿಮಳದೊಳೆ ಮನವ ನೆರಗಿಸು'' ಎಂದು. ಅಹಂಕಾರದ ಕತ್ತಲಿನಲ್ಲಿ ಸುಮಾರ್ಗ ಮರೆಯದೆ ಭ್ರಮಿಸುತ್ತಿದ್ದೇನೆ. ನಿನ್ನ ವಿಮಲದೃಷ್ಟಿ ಚಂದ್ರನಮೃತಕಿರಣದಿಂದ ದಾರಿ ದೋರು ಎಂದು ಬೇಡುತ್ತಾರೆ. ಬಡವರಭೀಷ್ಟೆಯ ಕೊಡುವಳೆಂದು ಬಡಿಬಡಿಸಿ ಬಂದೆ. ನಾನು ಬೇಡುವ ವರವನ್ನು ಕೊಟ್ಟರೆ ನೀನು ಕಮಲೇಶ ವಿಠಲರಾಯನ ಪಟ್ಟದರಸಿ ಎಂಬುದು ನಿಜ ಎಂದು ಕಟಕಿಯಾಡುತ್ತಾರೆ. ಸುರಪುರದ ಆನಂದ ದಾಸರು ದೇವಿಯ ಕರುಣೆಯ ಸಂಪತ್ತನ್ನೂ, ಕೀರ್ತಿಯನ್ನೂ, ಅದಕ್ಕೂ ಮಿಗಿಲಾಗಿ ದೇವರ ಮಧ್ಯಾಂತಿ ಕಪೆಯನ್ನೂ ಪಡೆದು ಆನಂದಿಸಿದವರು.

ಈ ಶತಮಾನದವರೂ, ಶ್ರೀ ವ್ಯಾಸರಾಯ ಮಠಾಧೀಶರೂ ಆಗಿದ್ದ ಶ್ರೀ ವಿದ್ಯಾಪ್ರಸನ್ನ ತೀರ್ಥರು ದೇವಿಯ ಬಗ್ಗೆ ಕೆಲವು ಸುಂದರ ಕೃತಿಗಳನ್ನು ರಚಿಸಿದ್ದಾರೆ.

ಕೊಳಲನೂದುವ ಗೋವಳ ನನ್ನ ಮನೆಯಲ್ಲಿದ್ದಾನೆ. ಅವನೊಡನೆ ನೀನೂ ಇಲ್ಲಿಗೆ ಬಂದು ನನ್ನ ಮನೆಯಲ್ಲಿ ಚಿನ್ನದ ಹೊಗೆಯಾಡಿಸು ಈ ಮಂದಿರ ನಿನ್ನದೇ ಎಂದು ಪ್ರಾರ್ಥಿಸುತ್ತಾರೆ. "ನಿನ್ನ ಕಟಾಕ್ಷ ಮಹಾ ಸುರಧೇನು, ನಿನ್ನ ಮನವು ಚಿಂತಾಮಣಿಯು, ನಿನ್ನಯ ಕರಗಳು ಸುರತರುವೆನಗೆ, ನವನಿಧಿಗಳು ನೀನೇ ಇಂದಿರೆ" ಎನ್ನುತ್ತಾರೆ. "ಹೃನ್ಮಂದಿರದಲಿ ಜ್ಞಾನವನು, ಮನ್ಮಂದಿರದಲಿ ಭಾಗ್ಯವನು ಅಮ್ಮ ಬೆಳಸೆ ಕಮಲೆ, ಈಶನಂಘ್ರಿಯಲಿ ಭಕ್ತಿಯನು, ಹರಿದಾಸ ದಾಸ್ಯದಲಿ ಶಕ್ತಿಯನು, ಮೋಸಕೆ ಸಿಗದ ವಿರಕ್ತಿಯನು ಕರುಣದಿಂದನೀಡು'' ಎಂದು ಬೇಡುತ್ತಾರೆ. ಅಮ್ಮಾ ನನಗೊಂದು ಉಪಕಾರವನ್ನು ಮಾಡು, ತುಂಗ ಮಹಿಮನನು ಎಡೆಬಿಡದೆ ಅವನಿಂಗಿತವನು ನೀನರಿತಿರುವೆ. ಒಂದನು ಅರಿಯದ ಭಕುತರೊಳಗೆ ಇವನೊಂದು ಎಂದು ಗೋವಿಂದ ನಿಗರುಹು— ಎಂದು ಬೇಡಿಕೊಳ್ಳುತ್ತಾರೆ.

ವಿದ್ಯಾಪ್ರಸನ್ನ ತೀರ್ಥರ ರಚನೆಗಳಲ್ಲಿ ವಿನೂತನ ಅರ್ಥವ್ಯಾಪ್ತಿಯಿಂದ ಶೋಭಿಸುತ್ತಿರುವ ರಚನೆಯೊಂದಿದೆ. "ಕವಳ ತಾಯಿ ಕವಳ ಅಮ್ಮ ಪಾಪಿ ಪರದೇಶಿಯ ಮರೆಯಬೇಡಿರಮ್ಮ" ಎಂದು ಜಗನ್ಮಾತೆಯನ್ನು ಬೇಡುತ್ತಿದ್ದಾರೆ. "ಸಂಜೆಯ ಕವಳಕ್ಕೆ ಸಾವಿರ ಆಪತ್ತು ಅಂಜಿ ಓದುವುದೆಂದು ಕೇಳಿಲ್ಲವೇನಮ್ಮ, ಭುಂಜಿಸಿ ನಿಮ್ಮಯ ಪತಿಯ ಪ್ರಸಾದವ ಎಂಜಲು ನಮಗಿಷ್ಟು ಜೋಳಿಗೆಗಿಕ್ಕವ್ವ" "ಕಮಲವ್ವ ನಿಮ್ಮಯ ಅಮೃತ ಹಸ್ತದ ಕವಳ ಎಮಗೊಂದು ಕ್ಷಣದಲ್ಲಿ ಅಮೃತವಾಗೋದವ್ವ. ದೇವಿಯ ದಿವ್ಯ ಹಸ್ತಗಳು ನೀಡಿದ ಭಿಕ್ಷೆ ಸುಧಾ ಸ್ಯಂದಕವಾಗುವುದರಲ್ಲಿ ಅಚ್ಚರಿಯೇನು ? ಆ ಭಿಕ್ಷೆಯಾದರೂ ಎಂತಹುದು! ಅತುಲ ಮಹಿಮ ನಿಮ್ಮ ಪತಿಯ ಪ್ರಸಾದವ ಪ್ರತಿದಿನವಿತ್ತು ಪ್ರಸನ್ನರಾಗಿರವ್ವ—ಎಂದು ಕಳಕಳಿಯಿಂದ ಕೇಳಿಕೊಳ್ಳುತ್ತಿದ್ದಾರೆ. ಈ ಪ್ರಸಾದವನ್ನು ಪಡೆದ ಭಕ್ತನ ಎಲ್ಲ ರೀತಿಯ ಹಸಿವೆಗಳೂ ಹಿಂಗಿ ಹೋಗುವುದಲ್ಲವೆ ?

ಹೀಗೆ ಹರಿದಾಸ ಶ್ರೇಷ್ಠರುಗಳು ಬಗೆಬಗೆಯಾಗಿ ಲಕ್ಷ್ಮೀದೇವಿಯನ್ನು ಸ್ತುತಿಸಿ ಒಲಿಸಿಕೊಂಡಿದ್ದಾರೆ. ತನ್ಮೂಲಕವಾಗಿ ಶ್ರೀಹರಿಯ ಕೃಪೆಯನ್ನೂ ಪಡೆದುಕೊಂಡ ಧನ್ಯಾತ್ಮರಾಗಿದ್ದಾರೆ. "ಕಿಮಲಭ್ಯತಿ ಭಗವತಿ ಪ್ರಸನ್ನೇ ಶ್ರೀ ನಿಕೇತನೇ''

ತಿರುಮಲೆ ತಿರುಪತಿ ದೇವಸ್ಥಾನಗಳು

# ತಿರುಮಲೆಯಲ್ಲಿ ವಸತಿಗಾಗಿ ದಾನಯೋಜನೆ

ಕಲಿಯುಗ ವೈಕುಂಠವೆಂದು ಹೆಸರಾದ ತಿರುಮಲೆ ಶ್ರೀ ವೆಂಕಟೇಶ್ವರನ ಆವಾಸಸ್ಥಳ. ಇಲ್ಲಿಗೆ ಸಹಸ್ರಾರು ಮಂದಿ ಯಾತ್ರಿಕರು ಪ್ರತಿದಿನವೂ ಬರುತ್ತಾರೆ. ಅನುದಿನವೂ ಹೆಚ್ಚುತ್ತಿರುವ ಯಾತ್ರಿಕರ ವಸತಿ ಸೌಕರ್ಯಗಳಿಗಾಗಿ ತಿ. ತಿ. ದೇ. ಗಳು ದಾನಯೋಜನೆಯಲ್ಲಿ ಕಾಟೇಜುಗಳು, ಸತ್ರಗಳು, ಅತಿಥಿಗೃಹಗಳನ್ನು ನಿರ್ಮಿಸುತ್ತಿದೆ. ವಿವಿಧ ಯೋಜನೆಗಳ ವಿವರಗಳು ಈ ರೀತಿ ಇವೆ.

## ಗರುಡಾದ್ರಿನಗರ ಕಾಟೇಜುಗಳು

ಪ್ರತಿ ಅಂತಸ್ತಿನಲ್ಲೂ 4 ಸೂಟ್‌ಗಳಿರುವಂತೆ ಎರಡು ಅಂತಸ್ತುಗಳ 18 ಕಾಟೇಜುಗಳನ್ನು ತಿ.ತಿ.ದೇ. ನಿರ್ಮಿಸುತ್ತಿದೆ.

* ಪ್ರತಿ ಸೂಟ್ ಸಹ 10'×12' ಗಳ ಒಂದು ಕೋಣೆ ಹಾಗೂ ಹೊಂದಿಕೊಂಡ ಶೌಚಗೃಹ, ಸಾಮಾನ್ಯ ವೆರಾಂಡಾವನ್ನು ಹೊಂದಿರುತ್ತದೆ.
* 30000 ರೂಗಳ ದಾನದಿಂದ ಒಬ್ಬರು 320 ಚದರಡಿ ಪ್ಲಿಂತ್ ಏರಿಯಾದ ಒಂದು ಸೂಟನ್ನು ತಮ್ಮ ಹೆಸರಿನಲ್ಲಿ ಕಟ್ಟಿಸಬಹುದು. ಅಪೇಕ್ಷಿಸಲ್ಪಟ್ಟಲ್ಲಿ 8 ಸೂಟ್‌ಗಳ ಇಡೀ ಕಾಟೇಜನ್ನು 2.4 ಲಕ್ಷ ರೂಗಳ ದಾನದ ಮೂಲಕ ಅಥವಾ 4 ಸೂಟ್‌ಗಳನ್ನು 1.2 ಲಕ್ಷ ರೂಗಳ ದಾನದ ಮೂಲಕ ಅಥವಾ 60000 ರೂಗಳ ದಾನದ ಮೂಲಕ 2 ಸೂಟ್‌ಗಳನ್ನು ನಿರ್ಮಿಸಬಹುದು.

## ರಾಮಬಗೀಚಾ ಅತಿಥಿಗೃಹ

ಈ ಅತಿಥಿಗೃಹವನ್ನು ದೇವಾಲಯದ ಈಶಾನ್ಯ ಭಾಗದಲ್ಲಿ ನಿರ್ಮಿಸಲಾಗುವುದು.

* ಇದು ಪ್ರತಿಯೊಂದರಲ್ಲೂ 50 ಸೂಟ್‌ಗಳಿರುವ ಮೂರು ಅಂತಸ್ತುಗಳನ್ನು ಹೊಂದಿದ್ದು, ಪ್ರತಿ ಸೂಟ್ 14'×18' ಗಳದ್ದಾಗಿ, ಸುಮಾರು 600 ಚದರಡಿ ಪ್ಲಿಂತ್ ಏರಿಯಾದಲ್ಲಿ ಸಾಮಾನ್ಯ ಅಂಗಳವನ್ನು ಹೊಂದಿರುತ್ತದೆ.
* ದಾನಿಗಳು ಒಂದು ಸೂಟ್ ನಿರ್ಮಾಣಕ್ಕೆ ರೂ 60,000 ನೀಡಬೇಕಾಗುವುದು.

## ಸಪ್ತಗಿರಿ ಧರ್ಮಶಾಲೆ

8.5 ಕೋಟಿ ರೂಗಳ ವೆಚ್ಚದ ಈ ಭಾರೀ ಯೋಜನೆಯನ್ನು ಸಪ್ತಗಿರಿ ಸತ್ರಗಳ ನಿರ್ಮಾಣಕ್ಕಾಗಿ ತಿ.ತಿ.ದೇ. ಕೈಗೊಂಡಿದೆ. ಪ್ರತಿ ಸೂಟ್‌ನ ನಿರ್ಮಾಣ ವೆಚ್ಚ 80000 ರೂಗಳು

ದಾನಿಗಳು 40,000 ರೂಗಳನ್ನು ತಮ್ಮ ಹೆಸರಿನ ಒಂದು ಸೂಟ್‌ಗಾಗಿ ನೀಡಬೇಕಾಗುವುದು.

## ದಾನಿಗಳಿಗೆ ಪ್ರತಿಫಲ

* ದಾನಿಗಳಿಗೆ ತಮ್ಮ ದಾನದ ಪ್ರತಿಯಾಗಿ ವರ್ಷಕ್ಕೆ 60 ದಿನಗಳ ಕಾಲ ತಿರುಮಲೆಯಲ್ಲಿ ಉಚಿತ ವಸತಿ ದೊರೆಯುವುದು.
* ಕಂಪನಿಗಳಿಗೂ, ಸಂಸ್ಥೆಗಳಿಗೂ ಈ ಸೌಲಭ್ಯ 15 ವರ್ಷಕ್ಕೆ ಮಾತ್ರ ಸೀಮಿತ.
* ದಾನಿಗಳ ಬಂಧುಗಳಿಗೆ ವಸತಿ ನೀಡುವಲ್ಲಿ ಆದ್ಯತೆ, ನೀಡಲಾಗುವುದು.
* ಪ್ರತಿ ಕಾಟೇಜು/ಸೂಟ್ ನ ಹೊರಗೆ ದಾನಿಗಳ ಹೆಸರನ್ನು ಕೆತ್ತಲಾಗುವುದು.

ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿಯವರ ಹೆಸರಿನಲ್ಲಿ ಪಡೆದ ಡಿ.ಡಿ. ಯನ್ನು ತಿರುಮಲೆಯ ಎಕ್ಸಿಕ್ಯೂಟಿವ್ ಇಂಜನಿಯರ್–V ಇವರಿಗೆ ಕಳುಹಿಸಿ.

**ತುಸು ಧನವನ್ನು ವಿನಿಯೋಗಿಸಿ, ಪುಣ್ಯಫಲವನ್ನು ಪಡೆಯಿರಿ**

ಮಿಕ್ಕ ವಿವರಗಳನ್ನು ಪಡೆಯಬಹುದಾದ ವಿಳಾಸ :

**ಕಾರ್ಯನಿರ್ವಹಣಾಧಿಕಾರಿ**
**ತಿ.ತಿ. ದೇವಸ್ಥಾನಗಳು**
**ತಿರುಪತಿ–೫೧೭೫೦೧ ಆಂಧ್ರಪ್ರದೇಶ.**

**ಕಾರ್ಯನಿರ್ವಹಣಾಧಿಕಾರಿ**

( 8ನೇ ಪುಟದಿಂದ)

ವಾರಾಹ ವಾಮನ ನರಸಿಂಹ ಕೇಶವ।
ನಾರಾಯಣಾಯ ನಮೋ ನಾರಾಯಣ ॥

(–ಶ್ರೀ ಪ್ರ. ವೆಂ. ಕೀ. ಪು. 112)

ಎಂಬುದು ಪ್ರಸನ್ನ ವೆಂಕಟದಾಸರು ನಾರಾಯಣನಲ್ಲಿ ಬೇಡಿಕೊಳ್ಳುವ ಕಳಕಳಿಯ ಪ್ರಾರ್ಥನೆ.

ಸತ್ಯಭಾಮಾ ವಿಲಾಪ (ಶ್ರೀಕೃಷ್ಣಪಾರಿಜಾತ): ಇದರಲ್ಲಿ ಒಟ್ಟು 29 ನುಡಿಗಳಿವೆ. ಮೊದಲು ಒಂದು ಶ್ಲೋಕ, ಅನಂತರ ಒಂದು ಪದ ಇದೆ. ನಾರದರು ಕೊಟ್ಟ ಪಾರಿಜಾತ ಪುಷ್ಪವನ್ನು ಶ್ರೀ ಕೃಷ್ಣ ರುಕ್ಮಿಣಿ ದೇವಿಗೆ ಕೊಟ್ಟ ಸಂಗತಿ ಸತ್ಯಭಾಮೆಗೆ ತಿಳಿದು ಅವಳು ಶ್ರೀಕೃಷ್ಣನ ಮೇಲೆ ಕೋಪಗೊಂಡು, ಆಭರಣಗಳನ್ನು ತೆಗೆದು ಬಿಸಾಡಿ 'ಕೃಷ್ಣನು ರುಕ್ಮಿಣಿಯನ್ನು ಹೆಚ್ಚಾಗಿ ಪ್ರೀತಿಸುತ್ತಿರುವನೇ ಹೊರತು ನನ್ನನ್ನಲ್ಲ'–ಎಂಬುದಾಗಿ ಪ್ರಲಾಪಿಸುತ್ತಾಳೆ. ಈ ವಿಷಯ ಕೃಷ್ಣನಿಗೆ ತಿಳಿದು ಸತ್ಯಭಾಮೆಯನ್ನು ಸಂತೈಸಿ ಪಾರಿಜಾತ ವೃಕ್ಷವನ್ನೇ ತಂದು ಸತ್ಯಭಾಮೆಯ ಅಂಗಳದಲ್ಲಿ ನೆಡುತ್ತಾನೆ. ಇದರಿಂದ ಸತ್ಯಭಾಮೆಗೆ ಅತೀವ ಆನಂದವಾಗಿ ಶ್ರೀಕೃಷ್ಣನ ಕೂಡ ಲೆತ್ತದಾಟ ಆಡುವಳು, ಶ್ರೀ ಕೃಷ್ಣನೇ ಜಯಗಳಿಸುವನು. ಕೊನೆಗೆ ಪ್ರಸನ್ನ ವೆಂಕಟೇಶನ ಸ್ತೋತ್ರವಿದೆ. ಈ ಕೃತಿಯಲ್ಲಿ ಸತ್ಯಭಾಮೆಯ ಸವತಿ ಮತ್ಸರ ಸಮರ್ಥವಾಗಿ ಅಭಿವ್ಯಕ್ತಗೊಂಡಿದೆ

ಭಾಗವತ: ಸಂಸ್ಕೃತ ಭಾಗವತದ ದಶಮ ಸ್ಕಂಧವನ್ನು ಆಧರಿಸಿ ಕನ್ನಡದಲ್ಲಿ ಬರೆದಿರುವ ಕೃತಿಯಿದು. ಮೂಲ ಭಾಗವತದಲ್ಲಿ 48 ಅಧ್ಯಾಯಗಳಿವೆ. ಈ ಪೈಕಿ ಪ್ರಸನ್ನ ವೆಂಕಟದಾಸರು 43 ಅಧ್ಯಾಯಗಳನ್ನು ಮಾತ್ರ ಕನ್ನಡಕ್ಕೆ ತಂದಿದ್ದಾರೆ. ದಾಸರ ಭಾಗವತ ಮೂಲಕ್ಕಿಂತ ಅನೇಕ ವಿಷಯಗಳಲ್ಲಿ ಬೇರೆಯಾಗಿವೆ. ಮೂಲದ ವಿವರವಾದ ಭಾಗಗಳು ಸಂಕ್ಷಿಪ್ತವಾಗಿವೆ. ಅಲ್ಲದೆ ಮೂಲದಲ್ಲಿ ಇಲ್ಲದ ಅನೇಕ ಅಂಶಗಳು ಇದರಲ್ಲಿ ಸೇರ್ಪಡೆಯಾಗಿವೆ.

ಕೀರ್ತನೆಗಳು: ಪ್ರಸನ್ನ ವೆಂಕಟದಾಸರ ಕೀರ್ತನೆಗಳಲ್ಲಿ ಮಾನವ ಜೀವನದ ಸಮಸ್ತ ವ್ಯಾಪಾರಗಳೂ ಸೇರಿಕೊಂಡಿವೆ. ಭಾವ ಭಾಷೆಗಳು ಸಮರ್ಥವಾಗಿ ಅಭಿವ್ಯಕ್ತಗೊಂಡಿವೆ. ಶ್ರೀ ಕೃಷ್ಣನ ಬಾಲಭಾಷೆಯಾಗಲಿ; ಹರಿನಾಮ ಸ್ಮರಣೆಯಾಗಲಿ ಭಾವಕ್ಕೆ ತಕ್ಕ ರೂಪು ಪಡೆದಿವೆ. ಶ್ರೀಕೃಷ್ಣನ ಬಾಲಭಾಷೆಯ ಪದ್ಯಗಳಂತೂ ವಿಶೇಷವಾಗಿ ಆಕರ್ಷಿಸುವಂಥವು. ಶಿಶು ಸಹಜಭಾವ ಮತ್ತು ಭಾಷೆ-ಇವೆರಡೂ ಪರಾಕಾಷ್ಠೆಯನ್ನು ತಲುಪಿರುವ ಪದ್ಯವೊಂದರ ಕೆಲವು ಚರಣಗಳಿವು.

ಎತ್ಕೋಡೆಯಮ್ಮಾ । ನಂಗನ್ನೆತ್ತಿಕೋ
ಅಮ್ಮಾ. ಬಾಲ ।
ವತ್ತು ಅತ್ತು ಬಂದೀನೆ । ಇತ್ತೆ ಅಮ್ಮಿ
ತಿಂದೇನೆ ॥
ತುತಿಬಾಯಿ ವಂಗ್ಯಾವೆ । ಬಿತಿ ಅವು
ನಾತತ್ತಿ ಬತ್ತಾವೆ ।
ಅತಿ ಅವು ಉಪ್ಪುಕಾಯಿ ಅಮ್ಮ
ಮಮ್ಮೊಲ್ಲೆ ।
ಉತ್ತತ್ತಿ ಬೆನ್ನಿ ತಿಂದೇನೆ॥ .........
ನಜ್ಜತ್ಲ ತಂದು ತೋಲೆ ।
ಚಂದಮಾಮ ನಿತ್ತತ್ತ ಕಲೆತಾಲೆ ।
ಪುತ್ತಮಿಲ್ಲಿ ತುಂಬ ವಲ್ಲೆ ಮುತ್ತು
ಕೊತ್ತಾಲೆ ।
ತನ್ನ ಬುತ್ತಿ ತುಂಬ ಹನ್ನು ಕೊಂದು
ತಿಂದೇನೆ ॥ ............
ಕೂಚಿಗಮ್ಮಿ ಕೂಬ್ಯಾಲೇ,
ನಂಗಂಗಜ್ಜ ತಾನೆ ಅವನಾಲೇ ।
ಪಾಚನ್ನ ವೆಂಕತ ಕಿತ್ತಪ್ಪ ಕನ್ನದೀಲಿ
ನಚುನಗಿ ನಗುತಾನೆ ಕಲತಾಲೇ ॥

–(ಶ್ರೀ ಪ್ರ. ವೆಂ. ಕೀ. ಪು. 74)

ಪ್ರಸನ್ನ ವೆಂಕಟದಾಸರಿಗೆ ಹರಿನಾಮ ಸ್ಮರಣೆಯಲ್ಲಿ ಅಚಲವಾದ ಶ್ರದ್ಧೆ, ನಂಬಿಕೆ. ಮಾನವನನ್ನು ಕಷ್ಟದಿಂದ ಪಾರುಮಾಡುವ ದಿವ್ಯಶಕ್ತಿ ಹರಿನಾಮಸ್ಮರಣೆಯಲ್ಲಿ ಅಡಗಿದೆಯೆಂಬುದನ್ನು ಹಲವಾರು ಪದ್ಯಗಳಲ್ಲಿ ತಿಳಿಯಪಡಿಸಿದ್ದಾರೆ.

ಮಹತಿಗೆ ಮಹತು ಶ್ರೀ ಹರಿಯ
ನಾಮಾ ॥
ಹಿಂದೊಡಗಿದಘರಾಶಿ ಬೇಯ್ಸಿ
ಬಿಸುಡುವ ನಾಮ ।
ಮುಂದೆ ಬಪ ದುರಿತ ಕಡ್ಡಾದ ನಾಮ ॥
ಮಂದಮತಿ ಕತ್ತಲೆಗೆ ಬಾಲಾರ್ಕಸಮ
ನಾಮ ।
ದಂದುಗದ ಬಳ್ಳಿಯನು ಹರಿವ ನಾಮ ॥
ಮುಕುತಿ ನಗರವ ತುಂಬಿಸುವ
ಅಭಯಕರನಾಮ ।
ಶಕುತರ ಮಾಲಿಕೆಗಭಯದ ನಾಮ ॥
ಅಕಳಂಕ ದಾಸರಿಗೆ ಆದ್ಯಂತಗತಿ ನಾಮ॥
ಭಕುತರೆಡರಿನ ಗಿರಿಗೆ ವಜ್ರನಾಮ ॥
ಸರ್ವಶ್ರುತ ಮುನಿಗಳುಗ್ಘಡಿಸುತಿಹ
ದಿವ್ಯನಾಮ ।
ಉರ್ವಿಯೊಳು ನಂಬಿದರ ಪೊರೆವ
ನಾಮ ॥
ಸರ್ವಜ್ಞರಾಯರು ನಿರ್ವಚಿಸುವ
ನಾಮ ।
ಸರ್ವೇಶ ಪ್ರಸನ್ವೆಂಕಟೇಶನ ಶ್ರೀನಾಮ॥

–(ಶ್ರೀ ಪ್ರ. ವೆಂ. ಕೀ, ಪು. 7)

ಅಂತೆಯೇ ಮತ್ತೊಂದು ಪದ್ಯವನ್ನು ಗಮನಿಸಬಹುದು,

ಹರಿಯೆನ್ನಬಾರದೆ ಜಿಹ್ವೆ ವಾರಂ
ವಾರಂ ।
ಪರಗತಿ ಮಾರ್ಗವು ದುರಿತವನಾಗ್ನಿಯು ।
ಪರಿಪರಿ ಭವರೋಗ ಔಷಧವಾಗಿಹ ॥
ಉರಿವ ಕಾಳಕೂಟ ಕಂಠದಿ ದಹಿಸಲು ।
ಹರಿನಾಮ ಹರನ ಹಲ್ಲಣ ಕಾಯ್ದಿತು ।
ಕರಿ ಉರಗದ ವಿಷಗಿರಿ ಶಸ್ತ್ರಭಯದಿಂದ।
ಹರಿನಾಮ ಬಾಲಕನ ಕಾಯ್ದಿತು ।
ಶಂಥಿಲಿ ನೆಕ್ಕರ ಚರಣವ ಬಿಗಿಕಟ್ಟೆ ।
ಹರಿನಾಮಾ ಕರಿಯನು ಕಾಯ್ದಿತು ।...

–(ಶ್ರೀ ಪ್ರ. ವೆಂ. ಕೀ. ಪು. 153)

ಪ್ರತಿನಿತ್ಯವೂ ಹರಿನಾಮಸ್ಮರಣೆ ಮಾಡಿ ತ್ರಿಕರಣಪೂರ್ವಕವಾಗಿ ನಡೆದರೆ 'ಇಹದಲ್ಲಿ ಸುಖವುಂಟು; ಪರದಲ್ಲಿ ಮುಕ್ತಿಯುಂಟು'– ಇದು ಪ್ರಸನ್ನವೆಂಕಟದಾಸರ ಉಪದೇಶ.

# ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ,

## ತಿರುಚಾನೂರು

ಅಲಮೇಲು ಮಂಗಾಪುರವೆಂದು ಹೆಸರಾದ ಈ ಊರು ತಿರುಪತಿಯಿಂದ ನಾಲ್ಕು ಮೈಲು ದೂರದಲ್ಲಿದೆ. ತಿರುಮಲೆಯ ದರ್ಶನವಾದ ಮೇಲೆ ಈ ಊರನ್ನು ದರ್ಶಿಸಿ ಪೂರ್ಣಕಾಮರಾಗುವುದು ಪರಂಪರೆ.

## ಆಲಯ ಕಾರ್ಯಕ್ರಮ.

| | ಶುಕ್ರವಾರಗಳಲ್ಲಿ | ಇತರ ದಿನಗಳಲ್ಲಿ |
|---|---|---|
| ಸುಪ್ರಭಾತ | ಬೆಳಗ್ಗೆ 4–00 ರಿಂದ 4–30 | ಬೆಳಗ್ಗೆ 5–00 ರಿಂದ 5–30 |
| ಸಹಸ್ರನಾಮಾರ್ಚನೆ | ,, 4–30 ರಿಂದ 5–00 | ,, 5–30 ರಿಂದ 6–00 |
| (ರೂ 6–50 ಶುಲ್ಕದಿಂದ 4 ಮಂದಿಗೆ ಅನುಮತಿ) | | |
| ನಿತ್ಯ ಅರ್ಚನೆ | ಬೆಳಗ್ಗೆ 5–00 ರಿಂದ 5–15 | ಬೆಳಗ್ಗೆ 6–00 ರಿಂದ 6–15 |
| (ರೂ 150/- ವಾರ್ಷಿಕ ಶುಲ್ಕ ನೀಡಿದ ಗೃಹಸ್ಥರನ್ನು ಅನುಮತಿಸಲಾಗುವುದು) | | |
| ಶುದ್ಧಿ, 1ನೇ ಗಂಟೆ | ಬೆಳಗ್ಗೆ 5–15 ರಿಂದ 5–45 | ಬೆಳಗ್ಗೆ 6–15 ರಿಂದ 6–15 |
| ಸರ್ವದರ್ಶನ | ,, 5–45 ರಿಂದ 7–00 | ,, 6–15 ರಿಂದ 1–00 |
| ಸಳ್ಳಿಂಪು | ,, 7–00 ರಿಂದ 7–30 | |
| ಅಭಿಷೇಕ | ,, 9–00 ರಿಂದ 10–00 | |
| ( ರೂ 100/- ಶುಲ್ಕದಿಂದ ಇಬ್ಬರಿಗೆ ಅನುಮತಿ ) | | |
| ಅಲಂಕಾರ 2ನೇ ಗಂಟೆ | 10–00 ರಿಂದ 11–00 | ಮಧ್ಯಾಹ್ನ 1–00 ರಿಂದ 1–30 |
| ಸರ್ವದರ್ಶನ | 11–00 ರಿಂದ ರಾತ್ರಿ 8–00 | 1–30 ರಿಂದ 7–00 |
| ಊಂಜಲ್ ಸೇವೆ | ರಾತ್ರಿ 7–00 ರಿಂದ 8–00 | — |
| (ಮುಕುರ ಮಂಟಪದಲ್ಲಿ) | (ಶುಲ್ಕ ರೂ 150/- ಗೃಹಸ್ಥರಿಗೆ 5 ಗ್ರಾಂಗಳ ಬೆಳ್ಳಿಯ ಪದಕ ಬಹೂಕರಣವಿದೆ) | |
| ರಾತ್ರಿ ಗಂಟೆ | ರಾತ್ರಿ [illegible]–00 ರಿಂದ 8–30 | ರಾತ್ರಿ 7–00 ರಿಂದ 7–30 |
| ಸರ್ವದರ್ಶನ | — | ,, 7–30 ರಿಂದ 8–30 |
| ಏಕಾಂತಸೇವೆ | 8–30 ರಿಂದ 9–00 | ,, 8–30 ರಿಂದ 9–00 |

ಪೇಷ್ಕಾರ್.

(4 ನೇ ಪುಟದಿಂದ)

ಜೋರಾಗಿ ಅಳುತ್ತಿದ್ದರು. ಸ್ವಲ್ಪ ಹೊತ್ತಿನ ಮೇಲೆ ಅವರಿಗೆ ಜ್ಞಾನ ಬಂದಿತು. ಏನಾಯಿತು? ಎಂದು ಶಿಷ್ಯರು ಕೇಳಿದಾಗ "ನಾನು ಕೃಷ್ಣನ ಮಧುರವಾದ ಕೊಳಲಿನ ಉಲಿಯನ್ನು ಕೇಳಿ ಅದನ್ನು ಹಿಂಬಾಲಿಸಿ ಕೃಷ್ಣನನ್ನು ಹುಡುಕುತ್ತಾ ಇಲ್ಲಿಗೆ ಬಂದೆನು" ಎಂದರು.

ಇದೇ ರೀತಿ ಒಂದು ದಿನ ರಾಸಲೀಲೆಯ ಗೀತೆ ಹಾಡುತ್ತಲೇ ಕೃಷ್ಣನನ್ನು ನೋಡುವ ಆವೇಶದಿಂದ ಸಮುದ್ರಕ್ಕೆ ಧುಮುಕಿದರು. ಅವರಿಗೆ ಸ್ಮೃತಿ–ತಪ್ಪಿತು. ಅವರ ನಿಶ್ಚಲ ದೇಹ ಕೊನಾರಕ್‌ದವರೆಗೆ ಕೊಚ್ಚಿಕೊಂಡು ಹೋಯಿತು. ಅಲ್ಲಿದ್ದ ಮೀನುಗಾರನ ಬಲೆಯಲ್ಲಿ ಆ ದೇಹ ಸಿಕ್ಕುಬಿದ್ದಿತು. ಅವರ ದೇಹ ಸ್ಪರ್ಶ ಮಾತ್ರದಿಂದಲೇ ಆ ಮೀನುಗಾರ "ಹರಿ ಹರಿ" ಎಂದು ಕೂಗ ತೊಡಗಿದ. ಅಲ್ಲಿಗೆ ಧಾವಿಸಿದ ಶಿಷ್ಯರು ಅವನನ್ನು ವಿಚಾರಿಸಲು ಅವನು ನಡೆದ ಸಂಗತಿ ತಿಳಿಸಿದನು. ಶಿಷ್ಯರಿಗೆ ಆ ದೇಹ ತಮ್ಮ ಗುರುಗಳದ್ದೇ ಎಂಬುದು ತಿಳಿಯಿತು. ಅವರು ಮೃತರಾಗಿದ್ದಾರೆಂದು ಭಾವಿಸಿ ಶಿಷ್ಯರು ಅವರ ಒದ್ದೆಯಾದ ಬಟ್ಟೆಗಳನ್ನು ತೆಗೆಯತೊಡಗಿದರು. ಆಗ ತಕ್ಷಣವೇ ಚೈತನ್ಯರು ಎದ್ದು ಕುಳಿತರು. ತಾವು ಕೃಷ್ಣನ ಜಲಕ್ರೀಡೆಯನ್ನು ನೋಡಲು ಹೋಗಿದ್ದುದಾಗಿ ತಿಳಿಸಿದರು.

ಹೀಗೆ ಭಕ್ತಿಯ ಆವೇಶದಲ್ಲಿದ್ದಾಗಲೇ 1533ರ ಜುಲೈ 9 ರಂದು ಶ್ರೀಕೃಷ್ಣ ಚೈತನ್ಯರು ದೈವಾಧೀನರಾದರು. ಆಗ ಅವರ ವಯಸ್ಸು 48ವರ್ಷ।

ಶ್ರೀಕೃಷ್ಣ ಚೈತನ್ಯರು ಶ್ರೀಕೃಷ್ಣ ಧ್ಯಾನದಿಂದ ತಾವು ನಿರ್ಮಲವಾದ, ಪರಿಪೂರ್ಣವಾದ ಆನಂದವನ್ನು ಅನುಭವಿಸಿದರು. ಅವರು ಜೀವಿಸಿದ್ದ ಕಾಲದಲ್ಲಿ ಹಿಂದೂ ಧರ್ಮದ ಗ್ರಂಥಗಳು ಬಹುಮಟ್ಟಿಗೆ ಸಂಸ್ಕೃತ ಭಾಷೆಯಲ್ಲಿದ್ದವು; ಎಷ್ಟೋ ಮಂದಿ ಹಿಂದುಗಳಿಗೆ ಅವುಗಳನ್ನು ಓದಲು ಸಾಧ್ಯವಿರಲಿಲ್ಲ. ಪಾಂಡಿತ್ಯಕ್ಕೆ, ಬುದ್ಧಿಶಕ್ತಿಗೆ ತುಂಬ ಪ್ರಾಶಸ್ತ್ಯವಿದ್ದ ಕಾಲವದು. ಆದರೆ ಸಾಮಾನ್ಯ ಮನುಷ್ಯ ಧರ್ಮವನ್ನಾಚರಿಸುವದು ಹೇಗೆ? ಸ್ವತಃ ಅದ್ಭುತ ಪಾಂಡಿತ್ಯವಿದ್ದ ಶ್ರೀಕೃಷ್ಣ ಚೈತನ್ಯರು "ಭಗವಂತನಿಗೆ ತನ್ನನ್ನು ಸಮರ್ಪಿಸಿಕೊಂಡರೆ ಸಾಕು, ಶುದ್ಧ ಭಕ್ತಿ ಮುಖ್ಯ" ಎಂದು ಉಪದೇಶಿಸಿದರು. ಜಾತಿ-ಮತಗಳ ವ್ಯತ್ಯಾಸವನ್ನು ಗಣಿಸದೆ ಶ್ರೀಮಂತರು ಬಡವರೆನ್ನದೆ ಸಾವಿರಾರುಮಂದಿಗೆ ಶಾಂತಿ ಪಡೆಯುವ ದಾರಿ ತೋರಿಸಿದರು. ಅವರು ಬರೆದ 'ಶಿಕ್ಷಾ ಅಷ್ಟಕ' ಎಂಬ ಗ್ರಂಥದಲ್ಲಿ ನಾಮ ಸಂಕೀರ್ತನೆಯ ಮಹಿಮೆಯ ತಿಳಿಸಿದ್ದಾರೆ. ಇಂಥ ಶ್ರೇಷ್ಠ ಸಂತಮಹಂತರು ಅಂದಿನಕಾಲದಲ್ಲಿ ಇಡೀ ದೇಶದ ತುಂಬ ಸಂಚರಿಸಿ ನಾಮಮಹಿಮೆಯನ್ನು ಜನತೆಗೆ ಎತ್ತಿ ತೋರಿಸುವುದರ ಮೂಲಕ ದೇಶದ ಜನರ ಭಾವೈಕ್ಯತೆಗೆ ಕಾರಣೀಭೂತರೆನಿಸಿದರು. *

# ತಿರುಕ್ಕುರಳ್‌ನ ಕೆಲವು ಪದ್ಯಗಳು

**ಕನ್ನಡಾನುವಾದ: ಶ್ರೀ ಬಿ.ಎಸ್. ರಾಮಾಚಾರ್**



ಅಕ್ಷರಮಾಲೆಗೆ ಅಕಾರವೊದಲು
ಭಗವಂತ ಲೋಕಕೆ ಮೊದಲು
ಏಸು ವಿದ್ಯೆಯಾ ಕಲಿತರೇನು? ಜಗ–
ದೀಶನಪಾದಕೆ ಮುದನಮಿಸದವನು॥ |೧|

ಮಳೆಯೇ ಲೋಕಕೆ ಅಮೃತಧಾರೆ
ಇಳೆಯು ಪ್ರಾಣಿಗಾಧಾರ ಬೆಳೆಯುಧರೆ
ಮಳೆಹೊಯ್ಯದಿರೆ ಕಾಡುವುದು ಹಸಿವು
ಉಳುಮೆಯಾಗದಿರೆ ರೈತನಿಗಳುವು॥ |೨|

ತ್ಯಾಗಿಯ ಹಿರಿಮೆ ಸಕಲರ ಸಮ್ಮತ
ತ್ಯಾಗಿಯ ಮಹಿಮೆ ಎಣಿಸಲು ಅಮಿತ
ಸುಖದುಃಖ ಬಂಧಮೋಕ್ಷ ತಿಳಿದವರು
ಸಕಲೇಂದ್ರಿಯ ಗೆದ್ದ ಸಿದ್ಧರು॥ |೩|

ಧರ್ಮವೇ ಸಿರಿಯು ಹಿರಿಯ ಭಾಗ್ಯ
ನಿರ್ಮಲ ಮನವೆ ಹೃದಯಕೆ ಸೌಖ್ಯ
ಧರ್ಮವ ಮರೆತರೆ – ಖಂಡಿತ ಕೇಡು
ಧರ್ಮ ಕರ್ಮವಾ ಎಡಬಿಡದೆ ಮಾಡು॥ |೪|

ಚೊಕ್ಕ ಗೃಹಸ್ಥಾಶ್ರಮವೇ ಮಿಗಿಲು
ಮಿಕ್ಕ ಮೂರು ಆಶ್ರಮಕಿದು ಹೆಗಲು
ಪ್ರೀತಿ ಧರ್ಮ ಮನೆ ಬಾಳ್ವೆ ಜೀವಾಳ
ಖ್ಯಾತಿಶೀಲಗುಣ ದಿವಜನುಮ ಸಫಲ॥ |೫|

ಗೃಹಿಣಿಯ ಸದ್ಗುಣ ಪೇಳುವೆ ಕೇಳಿರಿ
ವಿಹಿತವರಿತು ವೆಚ್ಚಗೈವಳುಸಿರಿ
ಹೆಂಡತಿ ಪತಿವ್ರತೆ ಇರೆ ಸಕಲ ಭಾಗ್ಯ
ಹೆಂಡತಿಯ ಸಂಗ ಬಾಳಿಗಾರೋಗ್ಯ |೬|

ಜಾಣಮಕ್ಕಳ ಪಡೆಯಬೇಕಣ್ಣಾ
ಕಾಣದಿರೆ ಏಳುಜನುಮದ ಕೇಡುನೋಡಣ್ಣಾ
ಅವರವರ ಜನುಮ ಸತ್ಕರ್ಮದ ಫಲವಣ್ಣಾ
ಆ ಸತ್ಪುತ್ರರೇ ಮಹಾಸಂಪತ್ತಣ್ಣಾ॥ |೭|

ಅತಿಥಿಯ ಸತ್ಕರಿಸಿ ಸದ್ಗತಿ ಪಡೆಯಿರೋ
ಅತಿ ಸಂಪಾದನೆ ಅದಕೇ ಎನ್ನಿರೋ
ದಿನನಲಿದು ಅತಿಥಿಯ ಸೇವೆ ಮಾಳ್ಪಗೆ
ಮನೆ ಹಿಲಿದು ಲಕ್ಷ್ಮಿ ನೆಲೆ ನಿಲ್ಲುವಳು॥ |೮|

ಸವಿನುಡಿ ಎಂಬುದು ಪ್ರೀತಿಯ ಮಾತು
ಸುವಿವೇಕದನಿಜ ತತ್ತ್ವದ ಮಾತು
ಮುಂದಹಾಸದಿ ಸವಿನುಡಿಯಾಡಲು
ಚೆಂದ ದಾನಕಿಂತಲು ಮೇಲಹುದು॥ |೯|

ಉಪಕಾರ ಮಾಡು ಪ್ರತಿಫಲವಿಲ್ಲದೆ
ಉಪಾಯದಿ ಸಗ್ಗ ಕಾಣುವೆ ತಪ್ಪದೆ
ಕಷ್ಟಬಂದಾಗ ಸಹಾಯಮಾಡು
ಇಷ್ಟ ಲೋಕಜನ ಕೊಂಡಾಡುವುದು॥ |೧೦|

ಬೇಡವೊ ಪಕ್ಷಪಾತ ಮಾಡಬೇಡವೊ
ನೋಡು ಸಮತೆಯಲಿ ಶತ್ರು ಮಿತ್ರರನು
ತಕ್ಕಡಿಯಂತೆ ಸರಿತೂಗಬೇಕು
ನ್ಯಾಯ ಸತ್ಯಕ್ಕೆ ಬೆಲೆ ಕೊಡಬೇಕು॥ |೧೧|

ಸಂಯಮ ಜೀವಿಗೆ ಅಮರರೆ ಸಖ್ಯ
ಸಂತರು ಹಿಡಿಯುವ ಹಾದಿ ಇದು ನಿತ್ಯ
ನಾಲಿಗೆಯನಂತೂ ಅಡಗಿಸಬೇಕು
ಬೀಳಿಸುವುದು ವಾಗ್ದೋಷ ನಿಜಕು॥ |೧೨|

ಆಚಾರ ಪ್ರಾಣಕಿಂತಲು ಹೆಚ್ಚು
ವಿಚಾರವಿಲ್ಲದವ ಓಟ ಪೆಚ್ಚು
ಅನಾಚಾರದಿಂದ ಬರುವುದು ನಿಂದೆ
ಏನಾಕಾರಣದಿ ಕಡು ದುಃಖ ಮುಂದೆ॥ |೧೩|

ಪರರ ಹೆಂಡತಿಯ ಬಯಸದಿರು ಮರುಳೆ
ಹೆರರೊಡವೆಗಾಶೆಪಡದಿರು ಹಡತರಳೆ

ಪರಸತಿಯ ಕಾಮು ಬಲ್ಲಿದನಾದರೂ
ಬರುವುದಧೋಗತಿ ನಿಂದೆ ನರಕವು ॥ । ೧೪ ।

ತಾಳಿ ಬಾಳುವುದು ಏಸು ತೆಗಳಿದರು
ತಾಳಿದಂತೆ ನೆಲ ಎಷ್ಟು ಅಗೆದರೂ
ಕೆಟ್ಟವಮಾತಾಡದಿರು ಸುಮ್ಮನಿರು
ಸಿಟ್ಟು ತೊರೆ, ಸಂಸಾರವ ನಡೆಸುತಿರು ॥ । ೧೫ ।

ಕರುಬದಿರು ಕರುಬದಿರು ಒಳಿತಲ್ಲ
ಕರುಬದಿರುವುದಕಿಂತ ಲಾಭವಿಲ್ಲ
ಸಿರಿತನ ಬಡತನ ಮಾಡಿದ ಕರ್ಮ
ಕರುಬುವಗೇಳಿಗೆ ಇಲ್ಲ–ಇದು ಮರ್ಮ ॥ । ೧೬ ।

ಆಶೆಯ ಪಡಬೇಡಿರಣ್ಣಾ
ಮೋಸ ಹೋಗಬೇಡಿರಣ್ಣಾ
ಪರರವಸ್ತು ಕದಿಯೆ ನಾಶವಣ್ಣಾ
ಆಶೆ ತೊರೆಯೆ ಲಕ್ಷ್ಮಿ ಒಲಿವಳಣ್ಣಾ । ೧೭ ।

ಹಿಂದೆ ಹಳಿದು ಎದುರಿಗೆ ಹೊಗಳ ಬಾರದಯ್ಯ
ಎಂದೇ ಇದು ಮಹಾಪಾಪ ಅಧರ್ಮ ಕಾಣಯ್ಯ
ಚಾಡಿ ಹೇಳುವ ನಡತೆ ಕೀಳುತನವಯ್ಯ
ಆಡುವವ ತನ ತಪ್ಪು ತಿಳಿದಲ್ಲಿ ಲೇಸಯ್ಯ ॥ । ೧೮ ।

ಕೆಟ್ಟ ಕೆಲಸಕೆ ದುಷ್ಟರು ಹೆದರುವುದಿಲ್ಲಯ್ಯ
ಸಜ್ಜನರು ಎಂದಿಗೂ ಹೆದರುವರಯ್ಯ
ತಾಮಾಡಿದ ದುಷ್ಕರ್ಮ ತನ್ನನೆ ಕೊಲ್ಲುವುದಯ್ಯ ॥ । ೧೯ ।

ಕೀರ್ತಿ ಪಡೆದು ಬಾಳ ಬೇಕು
ದಾನಿಗಳಾ ಹಾಡಬೇಕು
ಕೀರ್ತಿಹೀನ ನೆಲನಿಸ್ಸಾರ
ಕೀರ್ತಿಜೀವನವೆ ಅಮರ ॥ । ೨೦ ।

ಕರುಣೆಯೇ ಸಿರಿ ನಿಜಸಂಪತ್ತು
ಧನದ ಸಿರಿ ನೀಚರಿಗೂ ಉಂಟು
ತನ್ನ ಸ್ಥಿತಿ ಪರರಂತೆ ಎಣಿಸಬೇಕು
ಸಕಲ ಪ್ರಾಣಿಗಳಲ್ಲಿ ಕನಿಕರಬೇಕು ॥ । ೨೧ ।

ಕಷ್ಟ ತಾಳಿಕೊಳ್ಳುವುದೇ ತಪವು
ಕಷ್ಟ ಕೊಡದಿರುವುದೇ ತಪವು
ಬೇಡಿದ ಫಲವಾ ಪಡೆವುದು ತಪವು
ಕಾಮಿನಿ ಕಾಂಚನ ತೊಡೆವುದೆ ತಪವು ॥ । ೨೨ ।

ಕಳ್ಳತನ ಮಾಡಬೇಡಿರೋ ಅಯ್ಯ
ಹುಲ್ಲಿಗಿಂತ ಕೀಳಾಗಿ ಕಾಂಬರಯ್ಯ
ಕಳ್ಳನಿಗೆ ವಂಚಕನಿಗೆ ಸುಳ್ಳಗೆ ಸರ್ವನಾಶ
ಒಳ್ಳೆಯ ನಡತೆಯುವನಿಗೆ ಸ್ವರ್ಗಸಂಪತ್ತು ॥ । ೨೩ ।

ದಿಟನುಡಿ ದಿಟನುಡಿ ಎಲೆಮನವೇ
ದಿಟ ಕೇಡಾಗದನುಡಿ ಸತ್ಯವೇ
ಸತ್ಯವೆ ಸರ್ವೋತ್ತಮ ನಿಜ ಧರ್ಮ
ಸತ್ಯವೆ ವೇದಾಗಮ ನಿಜ ಕರ್ಮ ॥ । ೨೪ ।

ಕೋಪ ತಡೆದುಕೊಳ್ಳಬೇಕು
ಕೋಪ ವಿಫಲ ತಾಳದದು ಫಲ
ಕೋಪ ಬೆಂಕಿಗಿಂತ ಕ್ರೂರ
ಕೋಪ ವಿಲ್ಲದವನು ಜಾಣ ॥ । ೨೫ ।

ಅಹಿಂಸೆಯೇ ಪರಮ ಧರ್ಮ
ಹಿಂಸೆ ಕೊಲೆ ಪಾಪಕರ್ಮ
ಕೊಲೆಯ ಫಲ ಕೀಳುಬಾಳು
ಸಿರಿಯು ಇದ್ದರೂ ಕೊನೆಗೆ ಹಾಳು ॥ । ೨೬ ।

ನಿಲ್ಲದ್ದು ಅಸ್ಥಿರವು ನಿಲ್ಲುವುದು ಸ್ಥಿರವು
ಇದನರಿತು ನಡೆಯದಿರೆ ಅಜ್ಞಾನವು
ಸಾವು ಬರುವ ಮುನ್ನವೆ ಸತ್ಕರ್ಮ ಮಾಡು
ಲೋಕದಾ ಜೀವನದಿ ನೆಲೆಯಿಲ್ಲದಜಾಡು ॥ । ೨೭ ।

ಎಷ್ಟು ತೊರೆದರೆ ಅಷ್ಟು ದುಃಖ ಪರಿಹಾರ
ಎಷ್ಟು ತೊರೆದರೆ ಅಷ್ಟು ಸುಖ ಸಂಸಾರ
ಹುಟ್ಟುಬಾರದೆನುವರು ಒಡಲ ತೊರೆಯಲು ಸಿದ್ಧ
ಮಮಕಾರಬಿಟ್ಟವರು ಮುಕ್ತಿ ದಿಟಪಡೆವರು ॥ । ೨೮ ।

ನಿತ್ಯಾನಿತ್ಯವ ತಿಳಿಯದೆ ಶ್ರಮಿಸುವ ಮರುಳು
ಮತ್ತೆ ಹುಟ್ಟುವನು ತಿಳಿಯದೆಯೇ ಹುರುಳು
ಅಹಂಕಾರ ಮಮಕಾರವಳಿದರೆ ಮುಕ್ತಿಚೆಂದ
ಕಾಮ ಕ್ರೋಧ ಮೋಹವಳಿದರೆ ನಿತ್ಯಾನಂದ ॥ । ೨೯ ।

ಆಶೆಯೇ ಬಯಕೆ ಹುಟ್ಟಿಗೆ ಬಿತ್ತು
ಎಲ್ಲ ಜೀವಿಗೂ ಇದು ಕುತ್ತು
ಆಶೆಯು ಸ್ವಭಾವ ಜನ್ಮ ಬಂಧ
ಆಶೆ ತೊಲಗಿದರೆ ಜೀವನ್ಮುಕ್ತಿ ॥ । ೩೦ ।

ಉದ್ಯೋಗ ಶೀಲನಾಗುವುದೂ ವಿಧಿ
ಸೋಮಾರಿತನ ತೊಲಗುವುದೂ ವಿಧಿ
ಸುಖದುಃಖ ಸಮ ಅನುಭವಿಸಬೇಕು
ವಿಧಿಯ ಮೀರುವರಾರು ? ಬಲವಾದ್ದು ॥ । ೩೧ ।



# ಸಂಗ್ರಹ ಶ್ರವಣ ಯೋಗ್ಯವಾದ ಮೂರು ಸಂಗೀತ ಸುರುಳಿಗಳು

ಕಾಲದಿಂದ ಕಾಲಕ್ಕೆ ಹರಿದಾಸರು ಶ್ರೀನಿವಾಸನನ್ನು ಕುರಿತು ಹಾಡಿ ಕೊಂಡಾಡಿ ಕೃತಿರಚನೆ ಮಾಡಿರುವುದು ಸ್ಪಷ್ಟವೇ ಇದೆ. ಶ್ರೀನಿವಾಸನ ಬಗ್ಗೆ ಮುವತ್ತೆರಡು ಸಹಸ್ರ ಕೃತಿಗಳನ್ನು ವಿರಚಿಸಿ ಪ್ರಸಿದ್ಧನಾದ ಶ್ರೀ ಅನ್ನಮಾ-ಚಾರ್ಯರಂತೆಯೇ ಹರಿದಾಸರೂ ಸಹ ಅವನ ಭಕ್ತಜನ ಪ್ರೀತಿಗೆ ಮಾರುಹೋಗಿ ದೂರದೂರುಗಳಿಂದ ಅವನತ್ತ ಆಕರ್ಷಿತರಾದರು. ಅವರು ಹಾಡಿದ್ದು ಅಸಂಖ್ಯವಾಗಿದ್ದು, ಅನ್ನಮಾಚಾರ್ಯ ಕೃತಿಗಳನ್ನು ಹೆಚ್ಚು ಹೆಚ್ಚು ಜನಕ್ಕೆ ತಿಳಿಯಲು ಅನುಕೂಲವಾಗುವಂತೆ ವಿಖ್ಯಾತ ಸಂಗೀತ ವಿದ್ವಾಂಸರ ಸಂಗೀತದಿಂದ ಕ್ಯಾಸೆಟ್ಟುಗಳ ರೂಪದಲ್ಲಿ ಹೊರ ತರುತ್ತಿರುವಂತೆಯೇ, ಹರಿದಾಸರ ಕೃತಿಗಳನ್ನೂ ಜನಮನ ವನ್ನು ಹುಗಲನುಕೂಲವಾಗುವಂತೆ "ಹರಿದಾಸ ಪದ ತರಂಗಿಣಿ"ಯಲ್ಲಿ ಹೊರತರುವ ಪ್ರಯತ್ನ ನಡೆದಿದೆ. ಅದರ ಮೊದಲ ಮೂರು ತರಂಗಗಳೇ ಈಗ ಶ್ರೀ ವೆಂಕಟೇಶ್ವರ ಅನ್ನಮಾಚಾರ್ಯ ಸಂಗೀತೋತ್ಸವದಲ್ಲಿ ಪ್ರಕಟವಾದ ಮೂರು ಸಂಗೀತ ಸುರುಳಿಗಳು.

ಶ್ರೀನಿವಾಸನ ಸಂಸ್ತುತಿ ಮಲೆಯದೇವರ ಬಗ್ಗೆ ಪುರಂದರದಾಸರು ರಚಿಸಿದ ಹನ್ನೆರಡು ಕೀರ್ತನೆಗಳ ಸಂಗ್ರಹ. ದಾಸಸಾಹಿತ್ಯ ಪ್ರಾಜೆಕ್ಟಿನ ವಿಶೇಷಾಧಿಕಾರ ಶ್ರೀ ಕೆ. ಅಪ್ಪಣ್ಣಾಚಾರ್ಯರ ನಿರ್ದೇಶನದಲ್ಲಿ ಬೊಂಬಾಯಿ ಸೋದರಿಯರೆಂದು ಖ್ಯಾತರಾದ ಶ್ರೀಮತಿ ಲಲಿತ, ಶ್ರೀಮತಿ ಸರೋಜ ಹಾಡಿರುವ ಗೀತೆಗಳು ಸುಶ್ರಾವ್ಯ ವಾಗಿವೆ. ಶ್ರೀ ವೆಂಕಟೇಶ್ವರ ಸ್ವಾಮಿಯನ್ನು ಸುಪ್ರಭಾತ ಸೇವೆಗೆ ಆಹ್ವಾನಿಸುವ "ಏಳಯ್ಯ ಬೆಳಗಾಯಿತು" ಕೃತಿ ಭೂಪಾಳರಾಗದಲ್ಲಿ ಮಧುರವಾಗಿ ಮೂಡಿಬಂದಿದೆ. ಮೋಹನರಾಗದ "ನಾನೇನು ಮಾಡಿದೆನೋ ವೆಂಕಟರಾಯ", ಸುರುಟಿರಾಗದ "ಶರಣು ವೆಂಕಟರಮಣ", ಆನಂದಭೈರವಿ ಯಲ್ಲಿನ "ನೀನೇ ದಯಾಳೊ ನಿರ್ಮಲಚಿತ್ತ ಗೋವಿಂದ", ಪಂತುವರಾಳಿಯ "ಹಿಂದಿಲ್ಲ ಸ್ವಾಮಿ ಮುಂದಿಲ್ಲ", ಯಮನ್ ಕಲ್ಯಾಣಿಯ "ಇಂದು ನಿನ್ನ ಮೊರೆಯ ಹೊಕ್ಕೆ ವೆಂಕಟೇಶನ್" ಕೀರ್ತನೆಗಳು ಉತ್ಕೃಷ್ಟವಾಗಿವೆ.

ಅಲ್ಲಲ್ಲಿ ಉಗಾಭೋಗಗಳಿಂದ ಇಂಪಾದ ಈ ಧ್ವನಿ ಮುದ್ರಿಕೆಯಲ್ಲಿ ವಿವರಣೆ- ವ್ಯಾಖ್ಯಾನ ನೀಡಿದವರು ಖ್ಯಾತ ನಟ ಶ್ರೀ ಶರತ್‌ಬಾಬು.

ಪುರಂದರದಾಸರು ರಚಿಸಿದ ಶ್ರೀನಿವಾಸನ ವೈಭವ ಹದಿನೈದು ಕೃತಿಗಳ ಸಂಗ್ರಹ. ಹಾಡಿದವರು ಶ್ರೀಮತಿ ಎಂ. ಎಲ್. ವಸಂತಕುಮಾರಿ. ವ್ಯಾಖ್ಯಾನ ವಿವರಣೆ ಶ್ರೀ ಶರತ್‌ಬಾಬು. ನಿರ್ದೇಶನ ಶ್ರೀ ಕೆ. ಅಪ್ಪಣ್ಣಾಚಾರ್ಯರದ್ದು. ಶ್ರೀನಿವಾಸನ - ತಿರುಮಲೆಯೊಡೆಯನ ರೂಪ ಸಂಪತ್ತಿ ಅನುಗ್ರಹ ವಿಶೇಷ, ದಶಾವತಾರ ವಿವರಣೆಗಳ ಕೀರ್ತನೆಗಳು ಇಲ್ಲಿವೆ. ಮೋಹನರಾಗದ "ವೈದ್ಯ ಬಂದನು ನೋಡಿ" ಮುಖಾರಿರಾಗದ "ಕಂಡೆ ಕಂಡೆ ಸ್ವಾಮಿಯ ಬೇಡಿಕೊಂಬೆ" ಸಾರಂಗರಾಗ "ಇಂದು ನಾನೇನು ಸುಕೃತವ ಮಾಡಿದೆನೊ" ಸಾರಮತಿಯ "ನೀನಿರಲು ನಮಗೇತರ ಭಯವೊ" ಚಕ್ರ ವಾಕದ "ಸಕಲ ದುರಿತಗಳ ಪರಿಹಾರ ಮಾಡಿದೆಯೊ ವೆಂಕಟೇಶ", ಆನಂದಭೈರವಿಯ "ನಿನ್ನನೆ ನಂಬಿದೆ ನೀರಜ ನಯನ ಎನ್ನಪಾಲಿಸೊ ಇಂದಿರಾರಮಣ",ಮಧ್ಯಮಾವತಿಯ "ಗೋವಿಂದಾ ನಿನ್ನಂದ" ಕೃತಿಗಳು ಹಲವಾರು ಉಗಾ ಭೋಗಗಳ ನಡುವೆ ಸೇರಿ ಕರ್ಣರಸಾಯನವಾಗಿವೆ.

ಹರಿದಾಸ ಪದ ತರಂಗಿಣಿಯ ಮೂರನೆಯ ಸಂಗೀತ ಸುರುಳಿ "ಹರಿದಾಸರು ಕಂಡ ಶ್ರೀನಿವಾಸ". ಇದನ್ನು ಹಾಡಿ ದವರು ಕನ್ನಡದ ಹಿರಿಯರಾದ ಶ್ರೀ ಶ್ರೀ ವಿದ್ಯಾಭೂಷಣ ತೀರ್ಥ ಸ್ವಾಮೀಜೀ ಅವರು. ಸಂಗೀತ ಖ್ಯಾತ ವಿದ್ವಾಂಸ ಶ್ರೀ ಟಿ. ವಿ. ಗೋಪಾಲಕೃಷ್ಣ ಅವರದು. ಹದಿನಾಲ್ಕು ಕೀರ್ತನೆಗಳಲ್ಲಿ ಏಳು ಕೀರ್ತನೆಗಳಿಗೆ ಸ್ವರಸಂಯೋಜನೆ ಮಾಡಿದವರು ಶ್ರೀ ಪಿ. ರಾಮನಾಥನ್.

ಕೃತಿಯ ನಡೆಸಲು ಕಾರಣವಾದ ದೇವತೆಗಳ ಕ್ರಮ ವನ್ನು ವಿವರಿಸುವ ಪುರುದರದಾಸರ ಉಗಾಭೋಗ- "ಸತತ ಗಣನಾಥ ಸಿದ್ಧಿಯನೀವ ಕಾರ್ಯದಲಿ"-ಯಿಂದ ಆರಂಭ ವಾಗಿ "ಬಾರಯ್ಯ ವೆಂಕಟ ಮನ್ಮನಕೆ" ಎಂಬ ಗುರು ಜಗನ್ನಾಥದಾಸರ ಆರಭಿರಾಗದ ಕೃತಿಯಲ್ಲಿ ಹರಿದು ಸುರುಳಿ ಮುಂದುವರೆಯುತ್ತದೆ. ಶ್ರೀಪಾದರಾಜರ ಎರಡು ಕೃತಿ ಗಳು, ಪುರಂದರ ದಾಸರ ನಾಲ್ಕು ಕೃತಿಗಳು, ವಾದಿರಾಜರ ಮೂರು ಕೃತಿಗಳು, ವಿಜಯದಾಸರ ಎರಡು ಕೃತಿಗಳು, ಗುರುಜಗನ್ನಾಥದಾಸರ ಎರಡು ಕೃತಿಗಳು, ಕೂಡಿದ ಈ ಸುರುಳಿ ಕನಕದಾಸರ ಮಧ್ಯಮಾವತಿ ರಾಗದ "ಲಾಲಿ ಪಾವನ ಲಾಲಿ ಅಘಹರಣ" ಕೃತಿಯಲ್ಲಿ ಮುಕ್ತಾಯ ಹೊಂದುತ್ತದೆ. ಸಾರಂಗರಾಗದಲ್ಲಿನ "ಭಕುತಜನ ಮುಂದೆ ನೀನವರ ಹಿಂದೆ"- ವಿಜಯದಾಸರ ಕೃತಿ, ವಾದಿರಾಜರ ದರ್ಬಾರಿ ಕಾನಡದ ಕೃತಿ "ಶರಣು ಶ್ರೀ ವೈಕುಂಠನಾಯಕ ಶರಣು ಶ್ರೀ ಪುರುಷೋತ್ತಮ" ಪುರಂದರ ದಾಸರ ಖರಹರಪ್ರಿಯದಲ್ಲಿನ "ತಿರುಪತಿ ವೆಂಕಟರಮಣ ನಿನಗೇತಕೆ ಬಾರದೊ ಕರುಣ"ಗಳು ಹರಿದಾಸರ ಭಾವವನ್ನು ಸಂಗೀತದಲ್ಲಿ ಪ್ರತಿಬಿಂಬಿಸಿ ಆಯಾದಾಸರೇ ಹಾಡು ತ್ತಿರುವರೊ ಎಂಬಂತಿವೆ.

ಒಟ್ಟಿನಲ್ಲಿ ಕರ್ಣಾಮೃತವಾದ ಈ ಸಂಗೀತ ಸುರುಳಿಗಳು ಸಂಗ್ರಹ ಯೋಗ್ಯ, ನಿತ್ಯ ಶ್ರವಣಯೋಗ್ಯವಾಗಿವೆ.

---

**೧. ಪುರಂದರದಾಸರು- ಶ್ರೀನಿವಾಸನ ಸಂಸ್ತುತಿ.**

ನಂ. ಟಿ. ಟಿ. ಡಿ. 3001.

ಹಾಡಿದವರು – ಲಲಿತ, ಸರೋಜ.

**೨. ಪುರಂದರದಾಸರು- ಶ್ರೀನಿವಾಸನವೈಭವ.**

ನಂ. ಟಿ. ಟಿ. ಡಿ. 3002.

ಹಾಡಿದವರು – ಎಂ. ಎಲ್. ವಸಂತಕುಮಾರಿ.

**೩. ಹರಿದಾಸರು ಕಂಡ ಶ್ರೀನಿವಾಸ.**

ನಂ. ಟಿ. ಟಿ. ಡಿ. 3003

ಹಾಡಿದವರು

– ಶ್ರೀ ಶ್ರೀ ವಿದ್ಯಾಭೂಷಣ ತೀರ್ಥಸ್ವಾಮಿಜೀ

---



---

ಕ್ಯಾಸೆಟ್‌ಗಳಿಗಾಗಿ ಬರೆಯಿರಿ :

ವೆಲ್‌ಫೇರ್ ಆಫೀಸರ್,

ತಿ. ತಿ. ದೇ., ತಿರುಪತಿ.

**ಪ್ರತಿ ಕ್ಯಾಸೆಟ್ ಬೆಲೆ ರೂ. 25/- ಮಾತ್ರ.**

ಅಂಚೆ ವೆಚ್ಚ ಪ್ರತ್ಯೇಕ.

ರೂ. ಐದುನೂರಕ್ಕೆ ಮೀರಿದ ಖರೀದಿಗೆ

ಶೇ – 15 ರಿಯಾಯಿತಿ ಉಂಟು.

---

# ಶ್ರೀ ವೆಂಕಟೇಶ್ವರಸ್ವಾಮಿದೇವಾಲಯ, ತಿರುಮಲೆ

# ಉದಯಾಸ್ತಮಾನ ಸರ್ವ ಸೇವಾ ಯೋಜನೆ

ವರ್ಷಕ್ಕೊಂದು ದಿನ ಶ್ರೀ ವೆಂಕಟೇಶ್ವರಸ್ವಾಮಿಯ ಎಲ್ಲ ಸೇವೆಗಳ ವೆಚ್ಚವನ್ನೂ ಭರಿಸುವ ದತ್ತಿಯನ್ನು ನೀಡ ಬಯಸುವ ಭಕ್ತರಿಗಾಗಿ ದೇವಸ್ಥಾನದಲ್ಲಿನ ಉದಯಾಸ್ತಮಾನ ಪರ್ಯಂತ ಎಲ್ಲ ಸೇವೆಗಳನ್ನೂ ಮಾಡಿಸಲು ಅವಕಾಶ ಕಲ್ಪಿಸಿಕೊಡುವ ಒಂದು ವಿಶೇಷ ಯೋಜನೆಯನ್ನು ರೂಪಿಸಲಾಗಿದೆ. ಈ ಸರ್ವಸೇವೆಯಲ್ಲಿ ಸುಪ್ರಭಾತ, ತೋಮಾಲೆ, ಅರ್ಚನೆ, (ಮೂರು ಬಾರಿ), ನೈವೇದ್ಯ ಹಾಗೂ ಮತ್ತಿತರ ಸೇವೆಗಳು ಸೇರಿವೆ. ಈ ಯೋಜನೆಯ ಪರಿಧಿಯಲ್ಲಿ ಅರ್ಜಿತ ಸೇವೆಗಳಾದ ಕಲ್ಯಾಣೋತ್ಸವ, ಊಂಜಲ್‌ಸೇವೆ, ಬ್ರಹ್ಮೋತ್ಸವ, ಕೋಯಿಲ್ ಆಳ್ವಾರ್ ತಿರುಮಂಜನ, ಸಹಸ್ರ ಕಲಶಾಭಿಷೇಕ, ತಿರುಪ್ಪಾವಡ, ವಾಹನಸೇವೆಗಳು ಮೊದಲಾದವು ಬರುವುದಿಲ್ಲ.

ಈ ಯೋಜನೆಯ ಹಲವು ವೈಶಿಷ್ಟ್ಯಗಳು ಹೀಗಿವೆ;

* ಶುಕ್ರವಾರಗಳ ಹೊರತು ಇತರೆ ಯಾವುದೇ ದಿನಗಳ ಸರ್ವಸೇವೆಯ ದತ್ತಿಯಾಗಿ ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ. ತಿರುಪತಿ ಇವರಿಗೆ 1 ಲಕ್ಷ ರೂಗಳ ಭಾರತದಲ್ಲಿನ ಯಾವುದೇ ಬ್ಯಾಂಕ್‌ನ ಡಿಮಾಂಡ್ ಡ್ರಾಫ್ಟನ್ನೇ ಕಳುಹಿಸಬೇಕು. ಶುಕ್ರವಾರಗಳಲ್ಲಿನ ಸರ್ವಸೇವೆಗಾಗಿ ನಿಗದಿ ಆಗಿರುವ ದತ್ತಿಯ ಮೌಲ್ಯ ರೂ: 3 ಲಕ್ಷ. ಇದರಲ್ಲಿ ಶುಕ್ರವಾರದ ಅಭಿಷೇಕವೂ ಸೇರುವುದು.

* ಗೊತ್ತಾದ ದಿನದಂದು ಎಲ್ಲ ಸೇವೆಗಳಿಗೂ ಆರು ಮಂದಿಗೆ ಪ್ರವೇಶ ನೀಡಲಾಗುವುದು. ಎಂದರೆ ಶುಕ್ರವಾರಗಳ ಹೊರತು ಸುಪ್ರಭಾತ, ತೋಮಾಲೆ, ಸಹಸ್ರನಾಮಾರ್ಚನೆ ಏಕಾಂತ ಸೇವೆಗಳು. ಆಯಾ ದಿನದಲ್ಲಿ ಇಲ್ಲಿನ ಯಾವುದೇ ಸೇವೆಯನ್ನು ಯಾವ ಕಾರಣಕ್ಕಾಗಿಯಾದರೂ ಮುಂದೂಡಲಾಗಿದ್ದಲ್ಲಿ ಅಂತಹ ಸೇವಾ ಪ್ರವೇಶವಿರದು.

* ದತ್ತಿ ನೀಡಿದವರ ಹೆಸರನ್ನು ದೇವಸ್ಥಾನದ ಒಳಗಡೆ ಎದ್ದು ಕಾಣುವಂತೆ ಬರೆದು ಪ್ರದರ್ಶಿಸಲಾಗುವುದು. ಆ ದಿನದ ಆಸ್ಥಾನದಲ್ಲಿ ಅವರ ಹೆಸರು ಗೋತ್ರಗಳನ್ನು ಹೇಳಲಾಗುವುದು.

* ಆ ದಿನದ ಎಲ್ಲ ಅರ್ಜಿತಸೇವೆಗಳನ್ನು ದತ್ತಿ ನೀಡಿದವರು ಹಾಗೂ ಅವರ ಪೈಕಿಯವರು ವೀಕ್ಷಿಸಲು ಅನುಮತಿ ನೀಡಲಾಗುತ್ತದೆ.

* ದತ್ತಿ ನೀಡಿದವರಿಗೆ (1) ಶ್ರೀ ವೆಂಕಟೇಶ್ವರಸ್ವಾಮಿಯವರ ಕಲ್ಯಾಣೋತ್ಸವದಲ್ಲಿ ಅಂದು ಬಳಸಲಾದ ಒಂದು ಶೇಷವಸ್ತ್ರ
  (2) 25 ಲಾಡು ಹಾಗೂ ವಡೆಗಳನ್ನು ಬಹೂಕರಿಸಲಾಗುವುದು.

* ವಸ್ತು, ವಿಷಯಗಳ ದರಗಳು ಅಸಹಜವಾಗಿ ಏರಿದಲ್ಲಿ ದತ್ತಿ ನೀಡಿದವರಿಗೆ ಹೆಚ್ಚಿನ ದತ್ತಿಯನ್ನು ನೀಡಲು ಅವಕಾಶ ನೀಡಲಾಗುವುದು (ಒಂದುಬಾರಿಗೆ 10% ದಂತೆ). ದತ್ತಿ ನೀಡಿದವರು ಈ ಹೆಚ್ಚಿನ ಮೊತ್ತವನ್ನು ನೀಡಲು ಮುಂದೆ ಬರದಿದ್ದಲ್ಲಿ ತಿ.ತಿ.ದೇ. ಬೇರೊಂದು ದತ್ತಿಯನ್ನು ಸ್ವೀಕರಿಸಲು ಸ್ವತಂತ್ರವಾಗಿರುತ್ತದೆ. ಆಗ ಸೇವೆಗಳನ್ನು ಇಬ್ಬರು ಅಥವಾ ಹೆಚ್ಚಿನ ಗೃಹಸ್ಥರ ಹೆಸರಿನಲ್ಲಿ ನಡೆಸಲಾಗುವುದು. ದತ್ತಿ ನೀಡಿದವರಿಗೆ ಸೇವಾ ದಿನವನ್ನು ಮೂವತ್ತು ದಿನಗಳ ಮೊದಲೇ ಸಾಮಾನ್ಯವಾಗಿ ತಿಳಿಸಲಾಗುವುದು.

ಇತರ ವಿವರಗಳಿಗೆ ಹಾಗೂ ಸ್ಪಷ್ಟೀಕರಣಕ್ಕೆ
ಬರೆಯಿರಿ:

**ಕಾರ್ಯನಿರ್ವಹಣಾಧಿಕಾರಿ**
ತಿ. ತಿ. ದೇ. ತಿರುಪತಿ.

# ಆಡಳಿತ ನಿರ್ವಾಹಕ ಮಂಡಳಿಯ ತೀರ್ಮಾನಗಳು

ಶ್ರೀ ಬಾಲಾಜಿ ವಿಕಲಾಂಗ ಸಂಕ್ಷೇಮ ಸಮುದಾಯದ ಆಸ್ಪತ್ರೆಯನ್ನು ಆಧುನಿಕೀಕರಣಗೊಳಿಸಲು ಅನುಕೂಲವಾಗುವಂತೆ ಹತ್ತು ಲಕ್ಷರೂಗಳ ವೆಚ್ಚದಲ್ಲಿ ಫಿಸಿಕಲ್ ಥೆರಪಿ, ಎಲೆಕ್ಟ್ರೋ ಥೆರಪಿ, ಮೈಡಿಯೋ ಥೆರಪಿ, ಆಕ್ಯುಪೇಷನಲ್ ಥೆರಪಿ ಯೂನಿಟ್‌ಗಳನ್ನು ಏರ್ಪಾಡು ಮಾಡಲು ತೀರ್ಮಾನಿಸಲಾಯಿತು.

* * * *

ತಿ. ತಿ. ದೇ. ಆರಂಭಿಸಿರುವ ಪ್ರಾಜೆಕ್ಟುಗಳು, ಧರ್ಮ ಸತ್ರಗಳು, ಕಲ್ಯಾಣಮಂಟಪಗಳು ಅತಿಥಿಗೃಹಗಳು, ವೈದ್ಯಾಲಯ ಇತ್ಯಾದಿ ನಿರ್ಮಾಣಗಳಲ್ಲಿ ಪ್ರಜಾ ಸಂಕ್ಷೇಮ ದೃಷ್ಟಿಯಿಂದ ತ್ವರಿತಗತಿಯ ಕಾರ್ಯನಿರ್ವಹಣೆಗೆ ಅನುಕೂಲವಾಗುವಂತೆ ಈಗಿರುವ ಖಾಲಿ ಸ್ಥಳಗಳ ಬಗ್ಗೆಯಾದರೂ ನಿಷೇಧವನ್ನು ಸಡಿಲಗೊಳಿಸಲು ಸರ್ಕಾರವನ್ನು ಪ್ರಾರ್ಥಿಸಲು ತೀರ್ಮಾನಿಸಲಾಯಿತು.

* * * *

ಹಿಂದೂ ಧರ್ಮ ಪ್ರಸಾರದ ಉದ್ದೇಶದಿಂದ ಹೈದರಾಬಾದಿನ ನಲ್ಲಕುಂಟದ ಶ್ರೀ ಶೃಂಗೇರಿ ಸದ್ಗುರು ಶಂಕರ ಸೇವಾಸಮಿತಿಯವರಿಗೆ ರೂ. 13618/– ಗಳನ್ನು ವಂತಿಗೆಯಾಗಿ ನೀಡಲು ತೀರ್ಮಾನಿಸಲಾಯಿತು.

* * * *

ಒಂದು ಎಕರೆ ಸ್ಥಳ ಹಾಗೂ 75000 ರೂಗಳ ವಂತಿಗೆಯನ್ನು ಸ್ಥಳೀಯರು ನೀಡಿದಲ್ಲಿ ಕರೀಂನಗರದ ಮೆಟ್ಟುಪಲ್ಲಿಯಲ್ಲಿ ತಿ. ತಿ. ದೇ. ಕಲ್ಯಾಣಮಂಟಪವನ್ನು ನಿರ್ಮಿಸಲು ತೀರ್ಮಾನಿಸಲಾಯಿತು.

* * * *

ತಿರುಪತಿಯ ಶ್ರೀ ತ್ಯಾಗರಾಜ ಮಂದಿರ ನಿರ್ಮಾಣ ಹಾಗೂ ಉತ್ಸವ ಸಮಿತಿಯವರಿಗೆ 1986ರ ತ್ಯಾಗರಾಜ ಉತ್ಸವಗಳಿಗಾಗಿ 25000/- ರೂಗಳ ವಂತಿಗೆ ನೀಡಲು ತೀರ್ಮಾನಿಸಲಾಯಿತು.

* * * *

ತಿರುಪತಿಯ ಶ್ರೀ ವೆಂಕಟೇಶ್ವರ ನಾಟ್ಯಕಳಾಪರಿಷತ್ತಿನ 31 ನೇ ವಾರ್ಷಿಕೋತ್ಸವ ನಿರ್ವಹಣೆಗಾಗಿ 15000- ರೂಗಳ ವಂತಿಗೆ ನೀಡಲು ತೀರ್ಮಾನಿಸಲಾಯಿತು.

* * * *

ತಿರುಮಲೆಯ ಸ್ವಾಮಿ ಆಲಯದಲ್ಲಿ ಯಾತ್ರಿಕರ ರದ್ದತಿಯ ಕಾರಣದಿಂದಾಗಿ ಗೃಹಸ್ಥರು ಮಾಡಿಸುವ ನಿತ್ಯ ಆರತಿ, ನಿತ್ಯ ನವನೀತ ಆರತಿ, ನಿತ್ಯ ಅರ್ಚನೆಗಳನ್ನು ರದ್ದು ಮಾಡಬೇಕೆಂದೂ, ಆದರೆ ಕೆಲವು ಮಠಗಳಿಗೆ ಮಾತ್ರ ವಿರಾಮಕಾಲದಲ್ಲಿ ಅವಕಾಶ ನೀಡಬೇಕೆಂದೂ ತೀರ್ಮಾನಿಸಲಾಯಿತು.

* * * *

ತಿರುಮಲೆಯ ಕಲ್ಯಾಣ ಕಟ್ಟೆಯಲ್ಲಿನ ಕ್ಷೌರಿಕರಿಗೆ ಅಲ್ಲಿನ ಇತರ ಉದ್ಯೋಗಿಗಳಿಗೆ ನೀಡುವಂತೆಯೇ ಮೂರುವರ್ಷ ಕ್ರಮ್ಮ ಅಂಗೋಲಶಾಲುವನ್ನು ನೀಡಬೇಕೆಂದು ತೀರ್ಮಾನಿಸಲಾಯಿತು.

* * * *

ತಿರುಪತಿಯ ಬೈರಾಗಿ ಪಟ್ಟಣದ ತಿ. ತಿ. ದೇ. ಉದ್ಯೋಗಿಗಳ ಕಾಲೋನಿಯಲ್ಲಿನ ವಿದ್ಯುತ್ ಕಂಬಗಳು ಬೀದಿ ದೀಪಗಳು, ಸರ್ವೀಸ್ ಲೈನ್‌ಗಳಿಗಾಗಿ-6,65000 ರೂಗಳನ್ನು ಆಂಧ್ರಪ್ರದೇಶ್ ವಿದ್ಯುತ್ ಸಂಸ್ಥೆಗೆ ಮುಂಗಡವಾಗಿ ನೀಡಿ, ಈ ಹಣವನ್ನು ಆಯಾ ಉದ್ಯೋಗಿಗಳಿಗೆ ನೀಡುವ ಎರಡನೇ ಅಥವಾ ಮೂರನೇ ಕಂತಿನ ಸಾಲದಲ್ಲಿ ಹಿಂದಕ್ಕೆ ಪಡೆಯಲು ತೀರ್ಮಾನಿಸಲಾಯಿತು.

* * * *

ತಿರುಪತಿ-ತಿರುಮಲೆಗಳಲ್ಲಿ ಒಳಚರಂಡಿ ವ್ಯವಸ್ಥೆಯನ್ನುಂಟುಮಾಡಲು ಇಂಜಿನಿಯರಿಂಗ್ ವಿಭಾಗದಲ್ಲಿ ಹೆಚ್ಚಿಗೆ ಒಬ್ಬ ಎಕ್ಸಿಕ್ಯೂಟಿವ್ ಇಂಜನೀಯರ್ ಅಧೀನದಲ್ಲಿ ನಾಲ್ಕು ಉಪ ವಿಭಾಗಗಳಿಗೆ ನಾಲ್ವರು ಡೆಪ್ಯೂಟಿ ಎಕ್ಸಿಕ್ಯೂಟಿವ್ ಇಂಜಿನೀಯರ್‌ಗಳು, 16 ಅಸಿಸ್ಟೆಂಟ್ ಇಂಜಿನಿಯರ್‌ಗಳು, ಮತ್ತಿತರ ಅಗತ್ಯ ಉದ್ಯೋಗಿಗಳ ಏರ್ಪಾಡು ಮಾಡಲು ತೀರ್ಮಾನಿಸಲಾಯಿತು.

* * * *

ತಿ. ತಿ. ದೇ. ನಿಯಮಗಳ ಪ್ರಕಾರ ಭೂಮಿ ಹಾಗೂ ವಂತಿಗೆಯನ್ನು ನೀಡುವಂತಿದ್ದರೆ ಚಿತ್ತೂರು ಜಿಲ್ಲೆಯ ವಿ.ಕೋಟೆ, ಹಾಗೂ ಗುಡಿಪಾಡುಗಳಲ್ಲಿ ಕಲ್ಯಾಣಮಂಟಪಗಳನ್ನು ನಿರ್ಮಿಸಲು ತೀರ್ಮಾನಿಸಲಾಯಿತು.




## ತಿರುಮಲೆಯಲ್ಲಿ ಮಾಜಿ ರಾಷ್ಟ್ರಪತಿ

ಭಾರತದ ಮಾಜಿ ರಾಷ್ಟ್ರಪತಿ ಶ್ರೀ ನೀಲಂ ಸಂಜೀವ ರೆಡ್ಡಿಯವರು ತಮ್ಮ ಸತೀಮಣಿ ಶ್ರೀಮತಿ ನಾಗರತ್ನಮ್ಮ ಹಾಗೂ ಕುಟುಂಬ ಸದಸ್ಯರೊಡನೆ ತಿರುಮಲೆಗೆ ಆಗಮಿಸಿ ಒಂದು ವಾರಕಾಲ ಸ್ವಾಮಿಯ ಸೇವೆಯಲ್ಲಿ ತಲ್ಲೀನರಾಗಿದ್ದರು. ಜೂನ್ 25 ರ ಮಧ್ಯಾಹ್ನ ರೇಣಿಗುಂಟದವರೆಗೆ ದಾದರ್ ಎಕ್ಸ್‌ಪ್ರೆಸ್‌ನಲ್ಲಿ ಆಗಮಿಸಿದ ಅವರು ಅಲ್ಲಿನಿಂದ ಕಾರಿನಲ್ಲಿ ತಿರುಮಲೆಯನ್ನು ತಲುಪಿ ಅಲ್ಲಿನ ಬ್ರಹ್ಮಾನಂದರೆಡ್ಡಿ ಕಾಟೇಜಿನಲ್ಲಿ ತಂಗಿದ್ದು ಸ್ವಾಮಿಯ ದರ್ಶನ ಹೊಂದಿದರು.

## ತಿರುಪತಿಯಲ್ಲಿ ವಾಯುದೂತ್ ವ್ಯವಹಾರಕೇಂದ್ರ.

ಆಂಧ್ರಪ್ರದೇಶದ ಕೃಷಿ ಇಲಾಖಾಮಂತ್ರಿ ಶ್ರೀ ಆರ್. ರಾಜಗೋಪಾಲರೆಡ್ಡಿಯವರು ತಿರುಪತಿಯಲ್ಲಿ ಈಚೆಗೆ ವಾಯುದೂತ್ ವ್ಯವಹಾರ ಕೇಂದ್ರವನ್ನು ಉದ್ಘಾಟಿಸಿದರು.

ಯಾತ್ರಾಸ್ಥಳವಾದ ತಿರುಪತಿಗೆ ವಿಮಾನದ ಮೂಲಕ ಬರುತ್ತಿರುವ ಯಾತ್ರಿಕರ ಸಂಖ್ಯೆ ಹೆಚ್ಚುತ್ತಿರುವುದರಿಂದಾಗಿ ಈಗಿರುವ ವಾರಕ್ಕೆ ಮೂರುಬಾರಿಯ ವಾಯುದೂತ್ ಪ್ರಯಾಣ ಸೌಕರ್ಯವನ್ನು ಪ್ರತಿದಿನವೂ ಇರುವಂತೆ ಮಾಡಬೇಕೆಂದೂ, ಇಲ್ಲಿನ ವಿಮಾನ ನಿಲ್ದಾಣವನ್ನು ಭಾರಿವಿಮಾನಗಳ ಉಡ್ಡಯನಕ್ಕೆ ಅನುಕೂಲವಾಗುವಂತೆ ಅಭಿವೃದ್ಧಿಗೊಳಿಸಬೇಕೆಂದೂ ಅವರು ಸಲಹೆ ನೀಡಿದರು.

## ಶೀಘ್ರದಲ್ಲಿ ವೇದಗಳ ಪರ್ಷಿಯನ್ ಅವತರಣಿಕೆ.

17 ನೇ ಶತಕದಲ್ಲಿನ ಸಂಸ್ಕೃತ ವಿದ್ವಾಂಸ, ಮೊಗಲ್ ಸಾಮ್ರಾಟ ಷಹಜಹಾನನ ಮಗ ದಾರಾ ಷುಕೋ ಪರ್ಷಿಯನ್‌ಗೆ ಅನುವಾದಿಸಿದ ನಾಲ್ಕು ವೇದಗಳನ್ನು ಆಂಧ್ರಪ್ರದೇಶದ ಸರ್ಕಾರದ ಪ್ರಾಚ್ಯ ಹಸ್ತಪ್ರತಿ ಹಾಗೂ ಸಂಶೋಧನಾ ಸಂಸ್ಥೆ ಶೀಘ್ರದಲ್ಲಿಯೇ ಪ್ರಕಟಿಸಲಿದೆ.

ಈ ವಿಷಯವನ್ನು ಪ್ರಕಟಿಸಿದ ಆಂಧ್ರಪ್ರದೇಶದ ಶಿಕ್ಷಣ ಮಂತ್ರಿ ಶ್ರೀ ಮುದ್ದುಕೃಷ್ಣಮನಾಯುಡು ಅವರು ಸಂಸ್ಥೆಯಲ್ಲಿ ಉರ್ದು, ಪರ್ಷಿಯನ್, ಅರಾಬಿಕ್, ತೆಲುಗು, ಸಂಸ್ಕೃತ ಹಾಗೂ ಇತರ ಪ್ರಾಚ್ಯ ಭಾಷೆಗಳ 23 ಸಹಸ್ರ ಹಸ್ತಪ್ರತಿಗಳಿವೆಯೆಂದು ತಿಳಿಸುತ್ತ, ಉರ್ದು, ಅರಾಬಿಕ್, ಪರ್ಷಿಯನ್ ಹಸ್ತಪ್ರತಿಗಳು ಬಹುತೇಕ 12 ನೇ ಶತಕಕ್ಕೆ ಸೇರಿದವೆಂದೂ, ಮಿಕ್ಕವು 17 ನೇ ಶತಕದವೆಂದೂ ತಿಳಿಸಿದರು. ತಮಿಳುನಾಡಿನ ವಾಲಾಜಪೇಟೆಯ ತ್ಯಾಗರಾಜರ ಕೃತಿಗಳ ಮೈಕ್ರೋಫಿಲಂ ಸಂಪಾದಿಸಲು ಸಂಸ್ಥೆ ಪ್ರಯತ್ನಿಸುತ್ತಿದೆಯೆಂದು ಅವರು ಹೇಳಿದರು.

ಸಂಸ್ಥೆಯ ಭಗವತ್ ಗೀತೆಯ ಉರ್ದು ಅನುವಾದವನ್ನು ಪ್ರಕಟಿಸುತ್ತದೆಯೆಂದೂ ಅವರು ತಿಳಿಸಿದರು. ✦

ಮುಂದಿನ ಸಂಚಿಕೆಯಲ್ಲಿ .... .... ....

ಸಪ್ತಗಿರಿ. —ಸೆಪ್ಟೆಂಬರ್ 1986

**ಇಡುಗುಂಜಿ ಮಹಾಗಣಪತಿ**
– ಗಂಗಾಧರಪಟ್ಟ

**ಅರ್ಚಾವತಾರ ವೈಭವ**
– ಕೆ ಎಸ್. ಮುತ್ತುರಾಜು

**ಭಾರತದಲ್ಲಿ ನೃತ್ಯ**
– ಡಾ॥ ಎಸ್. ಅನಂತರಂಗಾಚಾರ್

**ಶಚೀದೇವಿ**
– ರಘುಸುತ

**ಹುಲುಗನಮುರಡಿಯ ವೆಂಕಟರಮಣ**
– ಮುಕುಂದ ಪುರೋಹಿತ

**ಜೊತೆಗೇ ಕಿಶೋರ ಜಗತ್, ಗೃಹಲಕ್ಷ್ಮಿ, ಇತ್ಯಾದಿ ಸ್ಥಿರ ಶೀರ್ಷಿಕೆಗಳು.**

**ನಿಮ್ಮ ಪ್ರತಿಯನ್ನು ಕಾಯ್ದಿರಿಸಿ.** ಬೆಲೆ: ರೂ. 1–00 ಮಾತ್ರ

ವಿಶೇಷ ಸೂಚನೆ: ಹೊಸದಾಗಿ ಚಂದಾದಾರರಾಗಬಯಸುವವರು ಕನಿಷ್ಠ ಒಂದು ವರ್ಷದ ಚಂದಾ ಹಣವನ್ನು ಕಳುಹಿಸಬೇಕು. ಅದಕ್ಕಿಂತಲೂ ಕಡಿಮೆ ಮೊತ್ತವನ್ನು ಸ್ವೀಕರಿಸಲಾಗುವುದಿಲ್ಲ. ವಾರ್ಷಿಕ ಚಂದಾ ರೂ. 12–00 ಮಾತ್ರ. ಹಿಂದಿನ ಚಂದಾದಾರರು ತಮ್ಮ ಚಂದಾ ಕ್ರಮಸಂಖ್ಯೆಯನ್ನು ತಪ್ಪದೆ ಪ್ರತಿ ಕಾಗದದಲ್ಲೂ ಬರೆಯಬೇಕು. ಬರೆಯಿರಿ – ವೆಲ್‌ಫೇರ್ ಆಫೀಸರ್ ಸೇಲ್ಸ್‌ವಿಂಗ್. ತಿ.ತಿ.ದೇ. ತಿರುಪತಿ.

# ತಿಂಗಳಿನ ಮುಖ್ಯದಿನಗಳು

## ಸೆಪ್ಟೆಂಬರ್ 1986

| | | |
|---|---|---|
| 6. | ಶನಿವಾರ | ಸಾಮವೇದ ಉಪಾಕರ್ಮ, ವರಾಹ ಜಯಂತಿ |
| 7. | ಭಾನುವಾರ | ವಿನಾಯಕ ಚತುರ್ಥಿ |
| 8. | ಸೋಮವಾರ | ಋಷಿ ಪಂಚಮಿ |
| 15. | ಸೋಮವಾರ | ವಾಮನ ಜಯಂತಿ |
| 17. | ಬುಧವಾರ | ಅನಂತಪದ್ಮನಾಭವ್ರತ |
| 18. | ಗುರುವಾರ | ಮಹಾಲಯ ಆರಂಭ |
| 22. | ಸೋಮವಾರ | ಮಹಾಭರಣಿ |
| 25. | ಗುರುವಾರ | ವ್ಯತಿಪಾತ ಮಹಾಲಯ. |

# ಶ್ರೀ ಗೋವಿಂದರಾಜಸ್ವಾಮಿ ದೇವಾಲಯ, ತಿರುಪತಿ.

## ದರ್ಶನ ಹಾಗೂ ಸೇವಾ ವಿವರಗಳು

| | ರಿಂದ | ವರೆಗೆ |
|---|---|---|
| ಸುಪ್ರಭಾತ | ಪ್ರಾ 5–00 | ಪ್ರಾ 5–30 |
| ವಿಶ್ವರೂಪ ಸರ್ವದರ್ಶನ* | ಪ್ರಾ 5–30 | ಪ್ರಾ 7–00 |
| ತೋಮಾಲ ಸೇವೆ (ಅರ್ಜಿತ ಪ್ರತಿವ್ಯಕ್ತಿಗೆ ರೂ 4–00) | ಪ್ರಾ 7–30 | ಪ್ರಾ 8–00 |
| ಅರ್ಚನ (ಅರ್ಜಿತ ಪ್ರತಿವ್ಯಕ್ತಿಗೆ ರೂ 4–00) | ಪ್ರಾ 8–00 | ಪ್ರಾ 8–30 |
| ಸರ್ವದರ್ಶನ | ಪ್ರಾ 9–00 | ಮ 12–30 |
| | ರಾ 7–00 | ರಾ 8–45 |
| | ರಾ 9–00 ಕ್ಕೆ | |

* ಶುಕ್ರವಾರ, ಏಕಾದಶಿ, ಉತ್ತರಾನಕ್ಷತ್ರದ ದಿನ ಮತ್ತಿತರ ಹಬ್ಬ ಹರಿದಿನಗಳಲ್ಲಿ ವಿಶ್ವರೂಪ ಸರ್ವದರ್ಶನವು ಪ್ರಾ 5–30 ರಿಂದ ಪ್ರಾ 6–30 ರ ವರೆಗೆ ಮಾತ್ರ.

## ಅರ್ಜಿತ ಸೇವೆಗಳು

| | | |
|---|---|---|
| 1. | ಗರುಡವಾಹನ | 32–00 |
| 2. | ಚಂದ್ರಪ್ರಭ ವಾಹನ | 32–00 |
| 3. | ಗಜವಾಹನ | 32–00 |
| 4. | ಅಶ್ವವಾಹನ | 32–00 |
| 5. | ಸಿಂಹವಾಹನ | 32–00 |
| 6. | ಹಂಸವಾಹನ | 32–00 |
| 7. | ಚಿಕ್ಕಶೇಷವಾಹನ | 32–00 |
| 8. | ದೊಡ್ಡ ಶೇಷವಾಹನ | 62–00 |
| 9. | ಸೂರ್ಯಪ್ರಭವಾಹನ | 62–00 |

## ಪಡಿಪ್ರಸಾದಗಳು

| | | |
|---|---|---|
| 1. | ದೋಸೆ ಕಾಲಸೋಲ | 35–00 |
| 2. | ದಧ್ಯೋದನ | 40–00 |
| 3. | ಪುಳಿಯೋಗರೆ | 50–00 |
| 4. | ಪೊಂಗಲು | 55–00 |
| 5. | ಸಕ್ಕರೆಪೊಂಗಲ್ | 55–00 |
| 6. | ಶಾಕರ ಭಾತ್ | 85–00 |
| 7. | ಕೇಸರೀ ಭಾತ್ | 90–00 |
| 8. | ಸೀರ | 155–00 |

ವಿವರಗಳಿಗೆ:

**ಪೇಷ್ಕಾರ್**
ಶ್ರೀ ಗೋವಿಂದರಾಜಸ್ವಾಮಿ ದೇವಾಲಯ,
ತಿರುಪತಿ.

Edited and Published on behalf of the T. T. Devasthanams by K. Subba Rao, M.A., and Printed at T. T. D. Press by M. Vijayakumar Reddy, Manager, T. T. D. Press, Tirupati – 517501.

# ಶ್ರೀ ವೆಂಕಟೇಶ್ವರ ದೇವಾಲಯ

# ತಿರುಮಲೆ

**3-10-86** ರಿಂದ



**12-10-86** ವರೆಗೆ

## ವಾರ್ಷಿಕ ಬ್ರಹ್ಮೋತ್ಸವ

| ದಿನಾಂಕ | ದಿನ | ಬೆಳಗ್ಗೆ | ರಾತ್ರಿ |
|---|---|---|---|
| 3–10–86 | ಶುಕ್ರವಾರ | — | ಸೇನಾಪತಿ ಉತ್ಸವ, ಅಂಕುರಾರ್ಪಣೆ. |
| 4–10–86 | ಶನಿವಾರ | ಧ್ವಜಾರೋಹಣ, ತಿರುಚ್ಚಿ ಉತ್ಸವ | ದೊಡ್ಡ ಶೇಷವಾಹನ |
| 5–10–86 | ಭಾನುವಾರ | ಚಿಕ್ಕ ಶೇಷವಾಹನ | ಹಂಸವಾಹನ |
| 6–10–86 | ಸೋಮವಾರ | ಸಿಂಹವಾಹನ | ಮುತ್ತಿನ ಪಲ್ಲಕ್ಕಿವಾಹನ |
| 7–10–86 | ಮಂಗಳವಾರ | ಕಲ್ಪವೃಕ್ಷವಾಹನ | ಸರ್ವಭೂಪಾಲವಾಹನ |
| 8–10–86 | ಬುಧವಾರ | ಪಲ್ಲಕಿಯಲ್ಲಿ ಮೋಹಿನೀ ಅವತಾರ | ಗರುಡೋತ್ಸವ |
| 9–10–86 | ಗುರುವಾರ | ಹನುಮದ್ವಾಹನ<br>ಸಾಯಂಕಾಲ ವಸಂತೋತ್ಸವ | ಗಜವಾಹನ |
| 10–10–86 | ಶುಕ್ರವಾರ | ಸೂರ್ಯಪ್ರಭವಾಹನ | ಚಂದ್ರಪ್ರಭವಾಹನ |
| 11–10–86 | ಶನಿವಾರ | ರಥೋತ್ಸವ | ಅಶ್ವವಾಹನ |
| 12–10–86 | ಭಾನುವಾರ | ತೀರ್ಥವಾರಿ, ಅವಭೃತೋತ್ಸವ | ಧ್ವಜಾವರೋಹಣ. |

ನೀವೂ ಬನ್ನಿ !

ನಿಮ್ಮವರನ್ನೂ ಕರೆತನ್ನಿ !!